# ಜೀವನ್ ಮತ್ತು ಹನುಮರ ಪರಿಚಯದ

## ಪ್ರತಿಭಾನ್ವಿತ ವ್ಯಕ್ತಿಗಳು

ಪ್ರತಿಭೆ ಅಸಾಧಾರಣ ಕಲ್ಪನಾಸಾಮರ್ಥ್ಯ, ಸೃಜನಶೀಲತೆ ಯಾ ಕ್ರಿಯಾಕುಶಲತೆಗಳನ್ನೊಳಗೊಂಡ ಒಂದು ಅಂತರ್ಜನ್ಯ ಶಕ್ತಿ. ಚಿಕ್ಕಂದಿನಲ್ಲೇ ಇಂತಹ ಪ್ರತಿಭೆಯ ಲಕ್ಷಣ ತೋರಿಸುವ ಮಕ್ಕಳನ್ನು ಅದ್ಭುತ ಬಾಲಕರೆಂದು ಕರೆಯಲಾಗುತ್ತದೆ.



**ಆಲ್ಬರ್ಟ್ ಐನ್‌ಸ್ಟೀನ್** (1879-1955) ಒಬ್ಬ ಪ್ರಜ್ಞಾವಂತ ವಿಜ್ಞಾನಿ. ಅವನು ಭೌತಿಕಶಾಸ್ತ್ರ ಕಲಿತು 25 ವರ್ಷದ ವಯಸ್ಸಿನಲ್ಲಿ ಸಾಪೇಕ್ಷವಾದ (ರಿಲೇಟಿವಿಟಿ) ತತ್ವವನ್ನು ರೂಪಿಸಿ ಅದರೊಂದಿಗೆ ಗುರುತ್ವಾಕರ್ಷಣ, ವಿದ್ಯುದಾಕರ್ಷಣ ಹಾಗೂ ಅಣುಶಕ್ತಿಗಳನ್ನು ವಿವರಿಸುವ ಸಲುವಾಗಿ ಇನ್ನಿತರ ಕೆಲವು ಸಿದ್ಧಾಂತಗಳನ್ನೂ ನೀಡಿದನು.



ಬಹುಮುಖ ಪ್ರತಿಭೆಯ ವ್ಯಕ್ತಿಗಳು ಅತ್ಯಂತ ವಿರಳ— **ಲಿಯೊನಾರ್ಡೊ ಡಾ ವಿಂಚಿ** (1452-1519) ಈ ಬಹುವಿರಳ ವ್ಯಕ್ತಿಗಳಲ್ಲೊಬ್ಬ. ಚಿತ್ರಕಲೆ, ಶಿಲ್ಪಕಲೆ, ಯಂತ್ರಶಾಸ್ತ್ರ, ವಾಸ್ತುಶಿಲ್ಪ ಹಾಗೂ ಸಾಪತ್ಯಶಾಸ್ತ್ರಗಳಲ್ಲೆಲ್ಲ ನಿಪುಣನಾಗಿದ್ದ ವಿಂಚಿ ಮನುಷ್ಯನ ದೇಹರಚನೆ, ಪ್ರಕೃತಿ ಹಾಗೂ ವೈಮಾನಿಕಶಾಸ್ತ್ರಗಳ ಬಗ್ಗೆ ಮಾಡಿದ ಸೂಕ್ಷ್ಮ ಅಭ್ಯಾಸ ಅವನ ಕೈಪತ್ರ ಪುಸ್ತಿಕೆಗಳಲ್ಲಿ ಕಾಣಸಿಗುವ ಚಿತ್ರನಿರೂಪಣೆಗಳಿಂದ ಸಿದ್ಧವಾಗುತ್ತದೆ. **ಮೊನಾ ಲಿಸಾ** ಅವನಿಂದ ರಚಿಸಲ್ಪಟ್ಟ ಅತ್ಯಂತ ಹೆಸರುವಾಸಿಯಾದ ಚಿತ್ರಕಲಾಕೃತಿಯಾಗಿದ್ದು ಜಗತ್ತಿನ ಉಚ್ಚತಮ ಬೆಲೆಯ ವರ್ಣಚಿತ್ರವೆಂದು ತಿಳಿಯಲಾಗುತ್ತದೆ.

**ಶ್ರೀನಿವಾಸ ರಾಮಾನುಜಂ** (1887-1920) ನಮ್ಮವನೇ ಆದ ಗಣಿತಶಾಸ್ತ್ರದ ಒರ್ವ ಘನಪಂಡಿತ. 16 ವರ್ಷದಲ್ಲಿ ಅವನು ತಾನೇ ಬಿಡಿಸಿರುವ ಸುಮಾರು 6000 ಪ್ರಮೇಯಗಳ ಸಂಗ್ರಹಮಾಡಿದ್ದ. ತನ್ನ ಸಮಕಾಲೀನ ಗಣಿತಶಾಸ್ತ್ರಪ್ರಗತಿಯ ಸಂಪರ್ಕವಿಲ್ಲದಿದ್ದರೂ ಗಣಿತದ ಅನೇಕ ಹೊಸ ಸಿದ್ಧಾಂತಗಳನ್ನು ರಾಮಾನುಜಂ ಕಂಡುಹಿಡಿದ. ತತ್ಪರಿಣಾಮವಾಗಿ ರಾಮಾನುಜಂ ಇಂಗ್ಲೆಂಡಿನ 'ರೋಯಲ್ ಸೊಸೈಟಿ'ಯ ಸದಸ್ಯನಾಗಿ ಚುನಾಯಿಸಲ್ಪಟ್ಟ ಪ್ರಥಮ ಭಾರತೀಯನಾದ. ನಿರಂತರ ಅಪೂರ್ಣಾಂಕದ ಮೇಲಿನ ಅವನ ನೈಪುಣ್ಯತೆಯನ್ನು ಈ ವರೆಗೆ ಇನ್ನಾರೂ ಸಾಧಿಸಿಲ್ಲ.





ಸಂಗೀತದ ಮೇಲೆ ತನ್ನ ಚಿರಪ್ರಭಾವ ಬೀರಿದ ಅದ್ಭುತಬಾಲಕ **ಡಬ್ಲ್ಯು. ಎ. ಮೊಜಾರ್ಟ್** (1756-1842) ತನ್ನ 5ನೆಯ ವರ್ಷದಲ್ಲೇ ಚಿಕ್ಕ ಚಿಕ್ಕ ಸಂಗೀತದ ತುಣುಕುಗಳನ್ನು ರಚಿಸತೊಡಗಿದನಂತೆ! ನಂತರ ಅವನು ಪಿಟೀಲು (ವಾಯೊಲಿನ್) ಬಾರಿಸುವುದರಲ್ಲಿ ನಿಷ್ಣಾತನಾಗಿ ಸಾರ್ವಜನಿಕ ಸಂಗೀತಮೇಳಗಳನ್ನು ನೀಡಲಾರಂಭಿಸಿ 16ರ ಹರೆಯದೊಳಗೆ ಪಿಟೀಲು ಬಾರಿಸುವುದನ್ನು ಬಿಟ್ಟು ಪಿಯಾನೋ ಬಾರಿಸುವುದರಲ್ಲಿ ದಕ್ಷತೆ ಗಳಿಸಿದ!





ಜೀವವಿಮೆ ನಿಮ್ಮ
ಭವಿಷ್ಯವನ್ನು ರಕ್ಷಿಸುವ
ಸುಭದ್ರ ಜಾಣ ವಿಧಾನ.
ಅದರ ಬಗ್ಗೆ ತಿಳಿದುಕೊಳ್ಳಿ.



ಭಾರತೀಯ
ಜೀವವಿಮಾ ನಿಗಮ

daCunha-LIC-113 KN

ಮುಂದಿನ ಸಲ: ಜೀವನ್ ಮತ್ತು ಹನುಮರು ನೋಬೆಲ್ ಪಾರಿತೋಷಕದ ಬಗ್ಗೆ ತಿಳಿವಳಿಕೆ ಸಂಗ್ರಹಿಸುವರು.

**Results of Chandamama—Camlin Colouring Contest No. 19 (Kannada)**

*1st Prize:* Satish Kamath, Bombay-5; *2nd Prize:* K. C. Ganesh Acharaya, Puttur; *3rd Prize:* K Narayna, Kalanja 574 212; *Consolation Prizes:* Channayya B. Desaimath, Hulageri; Divakara Kakathkar, Kolonanja; M. Sharad Bandiwadekar, Belgaum; Rajesh K. Bhat, Kumta; Ganapati A. Khode, Guledagud.

ಬಣ್ಣದ ಚಿಟ್ಟೆ, ಹೊನ್ನಿನ ಚಿಟ್ಟೆ, ಬಾರೇ ನೋಡೇ!
ನನ್ನೀ ತೋಟ, ನನ್ನೀ ಪುಷ್ಪ ಎಲ್ಲಾ ನೋಡೇ!
ಬಣ್ಣದ ಚಿಟ್ಟೆ ನೋಡೇ ಇಲ್ಲಿ, ಜೆಮ್ಸ್ ಇವೆ ಬಹಳಷ್ಟು!
ನಿನಗೂ, ನನಗೂ, ಗೆಳೆಯರಿಗೂ ಸಹ ಬೇಕಾದಷ್ಟು!








ಜೆಮ್ಸ್ ಸವಿಯುವಾಗ
ಪ್ರತಿ ನಿಮಿಷವೂ ರಸನಿಮಿಷ!

ಕ್ಯಾಡ್‌ಬರಿಸ್
ಚಾಕಲೇಟ್‌ಗಳು

ಕ್ಯಾಡ್‌ಬರಿಸ್ ಜೆಮ್ಸ್ ಮಣಿಮಾಲೆ, ಬಹುವಿಧ ಸಂತಸದ ಲೀಲೆ!

OBM/6642/KN

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ

ಸಂಚಾಲಕರು : ನಾಗಿರೆಡ್ಡಿ

ಪೂಜೆಗಳೂ, ಪುಣ್ಯಕಾರ್ಯಗಳೂ ನೋಡುವವರ ಹೃದಯಗಳನ್ನು ಅರಳಿಸಿ ಪವಿತ್ರ ಭಾವವನ್ನುಂಟು ಮಾಡುತ್ತವೆ. ಅದರಿಂದ ನೀತಿ ತಪ್ಪದೆ ನಡೆಯಬೇಕೆಂಬ ಪ್ರೇರೇಪಣೆ ಉಂಟಾಗುತ್ತದೆ. ಪ್ರೋತ್ಸಾಹ ದೊರೆಯುತ್ತದೆ. ಆದರೆ ಪೂಜೆ ಪುಣ್ಯಕಾರ್ಯಗಳ ಮೇಲೆ ಆಸಕ್ತಿ ಇರುವಂತೆ ಬಹಿರಂಗದಲ್ಲಿ ನಟಿಸುತ್ತಾ, ಅಂತರಂಗದಲ್ಲಿ ಎಂತಹ ಅಡ್ಡದಾರಿಯನ್ನಾದರೂ ತುಳಿದು ಧನ ಲಾಭವನ್ನೇ ಗುರಿಯಾಗಿಟ್ಟುಕೊಂಡವರು ಎಂತಹ ಕಷ್ಟಕ್ಕೆ ಸಿಕ್ಕುವರೆಂಬುದನ್ನು ಈ ಸಂಚಿಕೆಯ "ಗ್ರಹಣ ಸ್ನಾನ" ಕಥೆ ನಿರೂಪಿಸುತ್ತದೆ.

## ಅಮರವಾಣಿ

ಬುದ್ಧೇರ್ಬುದ್ಧಿಮತಾಂ ಲೋಕೇ ನಾಸ್ತ್ಯಗಮ್ಯಂ ಹಿ ಕಿಂಚನ
ಬುದ್ಧ್ಯಾ ಹತಾ ಯತೋ ನಂದಾಃ ಚಾಣಕ್ಯೇ ನಾಸಿ ಪಾಣಿನಾ

[ನಿಶಿತವಾದ ಬುದ್ಧಿಬಲವುಳ್ಳವನಿಗೆ ಲೋಕದಲ್ಲಿ ಸಾಧ್ಯವಿಲ್ಲದುದಾವುದೂ ಇಲ್ಲ. ಬಹು ದೊಡ್ಡ ಆಯುಧ ಬಲವಿರುವ ನಂದರನ್ನು ಚಾಣಕ್ಯನು ತನ್ನ ಬುದ್ಧಿ ಬಲದಿಂದಲ್ಲವೇ ಜಯಿಸಿದನು]

ಸಂಪುಟ : ೬೭ ಆಗಸ್ಟ್ '೮೧ ಸಂಚಿಕೆ : ೨

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦




CHITRA



# ತಮ್ಮನ ರೂಪು

ಒಂದು ಊರಿನಲ್ಲಿ ಜಗನ್ನಾಥನೆಂಬ ಗೃಹಸ್ಥನಿದ್ದನು. ಒಂದು ದಿನ ರಾತ್ರಿ ಮನೆಯವರೆಲ್ಲ ನಿದ್ರೆಯಲ್ಲಿದ್ದಾಗ ಸುಮಾರು ಮಧ್ಯರಾತ್ರಿಯ ಹೊತ್ತಿಗೆ ಒಮ್ಮೆಗೇ ಬೀದಿ ನಾಯಿಗಳ ಕೂಗಾಟ ಕೇಳಿ ಜಗನ್ನಾಥನಿಗೆ ಎಚ್ಚರವಾಯಿತು.

ಸ್ವಲ್ಪ ಹೊತ್ತು ಸುಮ್ಮನಿದ್ದು ಏನು ವಿಶೇಷವೋ ನೋಡೋಣವೆಂದುಕೊಂಡು, ಎದ್ದು ಹೊರಬಾಗಿಲನ್ನು ತೆರೆದು ಈಚೆಗೆ ಬಂದನು. ಕತ್ತಲೆಯಾಗಿದ್ದ ಬೀದಿಯಲ್ಲಿ ಒಂದು ಕತ್ತೆ ನಿಂತಿತ್ತು. ಅದನ್ನು ನೋಡಿಯೇ ನಾಯಿಗಳು ಬೊಗಳುತ್ತಿದ್ದುವು. ಚಳಿಯಾಗಿದ್ದುದರಿಂದ ಜಗನ್ನಾಥನು ನಾಯಿಗಳನ್ನು ಬೈದು ಹಿಂದೆ ತಿರುಗಿ ಮನೆಯೊಳಗೆ ನುಸುಳಲಿರುವಾಗ, ಬೀದಿಯ ಜಗಲಿಯ ಮೇಲೆ ಯಾವನೋ ಒಬ್ಬನು ಮುದುಡಿ ಮಲಗಿರುವುದು ಕಂಡಿತು.

"ಯಾರದು ?" ಎಂದು ಜಗನ್ನಾಥನು ಗಟ್ಟಿಯಾಗಿ ಕೇಳಿದನು. ಮಲಗಿದವನ ಕಡೆಯಿಂದ ಯಾವ ಪ್ರತ್ಯುತ್ತರವೂ ಬರಲಿಲ್ಲ. ಆ ಮನುಷ್ಯನನ್ನು ತಟ್ಟಿ ನೋಡಿದನು. ಅವನು ಚಳಿಗೆ ನಡುಗುತ್ತಿದ್ದನು. ಮೈ ಜ್ವರದಿಂದ ಸುಡುತ್ತಿತ್ತು.

"ಇಲ್ಲಿ ತುಂಬಾ ಚಳಿಯಾಗಿದೆ. ಆರೋಗ್ಯ ಬೇರೆ ಸರಿಯಾಗಿಲ್ಲ. ಒಳಗಾದರೂ ಬಂದು ಮಲಕ್ಕೋ. ನಾನು ಹಿಡಿದುಕೊಳ್ಳುತ್ತೇನೆ. ಏಳಪ್ಪ" ಎಂದನು ಜಗನ್ನಾಥ.

ಅವನು "ಉಹ್ಹುಹ್ಹು!" ಎಂದು ನರಳುತ್ತಾ ಬಲು ಕಷ್ಟದಿಂದ ಎದ್ದು ಜಗನ್ನಾಥನಿಗೆ ಕೈ ಮುಗಿದನು. ಜಗನ್ನಾಥನು ಅವನಿಗೆ ತನ್ನ ಕೈಗಳ ಆಸರೆ ಕೊಟ್ಟು ಒಳಗೆ ಕರೆದೊಯ್ದನು. ತರುವಾಯ ಚಾಪೆಯಲ್ಲಿ ಒಂದು ದುಪಟಿ ಹಾಸಿ, ಮಲಗಿಸಿ ಒಂದು ಕಂಬಳಿ ಹೊದೆಸಿದನು.

ಆ ಮನುಷ್ಯ ಮರು ನಿಮಿಷದಲ್ಲೇ ಗಾಢ ನಿದ್ರೆಗೆ ಬಿದ್ದನು. ಅವನನ್ನು ಕುರಿತು ಆಲೋಚನೆ ಮಾಡುತ್ತ ಜಗನ್ನಾಥನಿಗೆ ಬಹಳ ಹೊತ್ತು ನಿದ್ರೆ ಬರಲಿಲ್ಲ. ಆಮೇಲೆ ಯಾವಾಗ ನಿದ್ರೆ ಬಂತೋ ಅವನಿಗೆ ಗೊತ್ತಿಲ್ಲ.

ಯಾರೋ ಬಾಗಿಲು ಬಡಿಯುವ ಶಬ್ದವಾಗುತ್ತಿರಲು, ಅದರಿಂದ ಜಗನ್ನಾಥನು ಗಬಕ್ಕನೆ ಕಣ್ಣು ತೆರೆದನು. ಆಗ ಬೆಳಗಾಗಿ ಸೂರ್ಯನು ಅಷ್ಟೆತ್ತರ ಮೇಲೇರಿಯಾಗಿತ್ತು. ಹೊರಗೆ ಬಾಗಿಲು ಬಡಿದುದು

ಎಂ. ಕೆ. ಈಶ್ವರರಾವ್



ಅವನ ಹೆಂಡತಿ ರತ್ನಳೇ. ಅವಳು ಮುಂಚಿನ ದಿನ ಅದೇ ಊರಿನಲ್ಲಿ ನಾಲ್ಕು ಬೀದಿಗಳ ಆಚೆಗೆ ನಡೆದ ಅವಳ ಬಂಧುಗಳ ಮದುವೆಗೆ ಹೋಗಿದ್ದಳು. ಬೆಳಗಿನ ಜಾವದಲ್ಲಿ ಹೊರಟು ಅಲ್ಲಿಂದ ಮನೆಗೆ ಹಿಂದಿರುಗಿದ್ದಳು.

"ಏನ್ರೀ ಇದು ? ಇಷ್ಟು ಹೊತ್ತೇರುವವರೆಗೂ ಮಲಗಿದ್ದೀರೇನು ?" ಎನ್ನುತ್ತಾ, ಒಳಗೆ ಬಂದ ರತ್ನ, ಕೋಣೆಯ ಬದಿಯಲ್ಲಿ ಚಾಪೆಯ ಮೇಲೆ ಕಂಬಳಿ ಹೊದ್ದುಕೊಂಡು ಮಲಗಿರುವ ಮನುಷ್ಯನನ್ನು ನೋಡಿ, "ಯಾರೋ ಬಂದಹಾಗಿದೆ, ಯಾರದು ?" ಎಂದು ಕೇಳಿದಳು.

"ಯಾರೋ ಗೊತ್ತಿಲ್ಲ ಪಾಪ !" ಎಂದು ಜಗನ್ನಾಥನು ರಾತ್ರಿ ನಡೆದ ಸಮಾಚಾರವನ್ನೆಲ್ಲಾ ಹೆಂಡತಿಯೊಂದಿಗೆ ಹೇಳಿದನು.

"ಅಯ್ಯೋ ಪಾಪವೇ ! ಬಿಸಿ ಬಿಸಿ ಹಾಲು ಸ್ವಲ್ಪ ಕಾಯಿಸಿ ಕೊಡುತ್ತೇನೆ. ಕುಡಿದರೆ ಸ್ವಲ್ಪ ಹುಷಾರಾದಾನು. ನೀವು ಅವನನ್ನು ಎಬ್ಬಿಸಿ ಬಚ್ಚಲಿಗೆ ಕರೆದೊಯ್ದು ಮುಖ ತೊಳೆಯಲು ಹೇಳಿರಿ" ಎಂದು ಅವಳು ಬೇಗ ಬೇಗನೆ ಅಡಿಗೆ ಮನೆಯೊಳಗೆ ಹೋದಳು.

ಜಗನ್ನಾಥನು ಆ ಮನುಷ್ಯನನ್ನು ಎಬ್ಬಿಸಬೇಕೆಂದು ಅವನ ಮೇಲೆ ಕೈಯಿಟ್ಟು ಗಾಬರಿಬಿದ್ದನು. ರಾತ್ರಿ ಬೆಂಕಿಯಂತೆ ಸುಟ್ಟುಕೊಂಡಿದ್ದ ಅವನ ಶರೀರವು ಈಗ ಮಂಜಿನ ಗಡ್ಡೆಯಂತಿದ್ದಿತು. ಶ್ವಾಸವೂ ಇರಲಿಲ್ಲ.

"ಅಯ್ಯೋ! ಸತ್ತಿದ್ದಾನೆ ಕಣೇ ! ಯಾರಪ್ಪಾ ಇವನು!" ಎಂದು ಕೂಗಿದ ಜಗನ್ನಾಥ.

ಅಡಿಗೇ ಮನೆಯಲ್ಲಿದ್ದ ರತ್ನ ಓಡಿಬಂದು "ಸತ್ತನಾ ! ಅಯ್ಯಯ್ಯೋ ! ಈಗೇನು ಮಾಡೋಣ ? ಯಾರೋ ಏನೋ ? ಯಾವ ಊರೋ ? ಅವನ ಕಡೆಯವರು ಯಾರಿದ್ದಾರೋ ? ಎಲ್ಲಿದ್ದಾರೋ ?" ಎಂದು ರತ್ನ ಬಡಬಡಿಸಿದಳು.

ಜಗನ್ನಾಥನು ಆ ಮನುಷ್ಯನ ಸೊಂಟದ ಹತ್ತಿರ ತಡಕಾಡಿದನು. ಗಿಜಿ ಗಿಜಿ ಎಂಬ ಹಣದ ಚೀಲವೊಂದು ಸಿಕ್ಕಿತು. ಆ ಚೀಲವನ್ನು ತೆಗೆದು ನೆಲದಲ್ಲಿ ಸುರಿದನು. ಹಣದೊಂದಿಗೆ ಒಂದು ಕಾಗದ ಕೂಡಾ ಕೆಳಗೆ ಬಿತ್ತು. ಅದು ತಾಯಿ ಮಗನಿಗೆ ಬರೆದ ಕಾಗದ. ಅದರಲ್ಲಿ ಹೀಗೆ ಬರೆಯಲಾಗಿತ್ತು :

"ಕಂದಾ ನಾರಾಯಣಾ, ನಿನಗೆ ಇತ್ತೀಚೆಗೆ ಆಗಾಗ ಜ್ವರ ಬರುತ್ತಾ ಇರುತ್ತದೆಂದು ನಮ್ಮೂರವನೊಬ್ಬ ಪೇಟೆಯಲ್ಲಿ ನೋಡಿ ನನ್ನ ಹತ್ತಿರ ಹೇಳಿದ. ಈಗ ಹೇಗಿದೆ ? ಇಲ್ಲಿ ನಿನ್ನ ತಮ್ಮನ ಪರಿಸ್ಥಿತಿ ಏನೂ ಚೆನ್ನಾಗಿಲ್ಲ. ಮಗಳ ಮದುವೆಗೆ ಮೂರು ಸಾವಿರ ರೂಪಾಯಿಗಳನ್ನು ಹೇಗೆ ತರಲಿ ? ಎಲ್ಲಿಂದ ತರಲಿ? ಅಂತ ಬಹಳ ಚಿಂತೆಯಲ್ಲಿದ್ದಾನೆ. ಒಳ್ಳೆಯ ಸಂಬಂಧ ಬಂದಿದೆ. ಈ ಸಮಯದಲ್ಲಿ ನೀವು ಅಣ್ಣ ತಮ್ಮಂದಿರು ಹಳೆಯ ಮಾತನ್ನೂ ಸಣ್ಣ ಹಟವನ್ನೂ ಮರೆಯಬೇಕು. ರಾಧೆಯ ಮದುವೆಗೆ ನೀನು



ಆಯಿತು. ನಮಗೆ ಇವನ ತಮ್ಮನ ವಿಳಾಸವಾದರೂ ಗೊತ್ತಾಯಿತು " ಎಂದನು.

"ಹಾಗಾದರೆ ನೀವು ಬೇಗನೇ ಆ ಊರಿಗೆ ಹೊರಟುಬಿಡಿ. ಅವರಿಗೆ ಈ ಕಾಗದವನ್ನೂ ಹಣವನ್ನೂ ಕೊಟ್ಟು ಸಮಾಚಾರ ಹೇಳಿ ಕರೆದುಕೊಂಡು ಬನ್ನಿರಿ. ನೀವು ಬರುವ ವರೆಗೂ ನಾನು ಈ ಶವವನ್ನಿಟ್ಟುಕೊಂಡು ಮನೆಯಲ್ಲಿರಲಾರೆ. ಮದುವೆ ಮನೆಗೆ ಹೋಗಿ ಅಲ್ಲೇ ಇರುತ್ತೇನೆ. ಮನೆಗೆ ಬೀಗ ಹಾಕೋಣ" ಎಂದಳು ರತ್ನ.

ಆ ಗಂಡಹೆಂಡಿರು ಬೇಗನೇ ಹೊರಟು ಮನೆಗೆ ಬೀಗ ಹಾಕಿದರು. ಜನಾರ್ದನನು ಬಾಡಿಗೆಗೊಂದು ಗಾಡಿ ಮಾಡಿಕೊಂಡು ಎರಡು ಹರದಾರಿ ದೂರದಲ್ಲಿರುವ ನಾರಾಯಣನ ತಮ್ಮನ ಊರಿಗೆ ಹೊರಟನು.

ಅವನು ಆ ಊರಿಗೆ ತಲುಪುವಾಗ ಮಧ್ಯಾಹ್ನವಾಯಿತು. ಅಲ್ಲಿ ಬೇಕಾದ ಮನೆಯುನ್ನು ಹುಡುಕಲು ಕಷ್ಟವೇನೂ ಆಗಲಿಲ್ಲ. ಆದರೆ ಆ ಮನೆಯ ಹತ್ತಿರ ಹೋದ ಕೂಡಲೇ ಒಳಗಿನಿಂದ ಕೇಳಿಬರುವ ಸಂಭಾಷಣೆ ಅವನನ್ನು ಅಲ್ಲೇ ತಡೆಯಿತು. ಸ್ವಲ್ಪ ಹೊತ್ತು ಕೇಳುತ್ತಾ ನಿಂತನು.

"ಅಮ್ಮಾ, ಎಲ್ಲಿಯೂ ಹಣ ಸಿಗಲಿಲ್ಲ. ಆದ್ದರಿಂದ ಈ ಸಂಬಂಧ ಸದ್ಯ ಬಿಟ್ಟುಬಿಡೋಣ. ಬೇರೆ ಸಂಬಂಧ ನೋಡಿಕೊಳ್ಳಿ ಅಂತ ಅವರಿಗೆ ಹೇಳಿಬಿಡುತ್ತೇನೆ" ಎಂದು ಹೇಳುವವನು ಸತ್ತ ನಾರಾಯಣನ ತಮ್ಮನೇ ಎಂದು ಜಗನ್ನಾಥನು ತಿಳಿದುಕೊಂಡನು.

"ಇದೆಂಥ ಮಾತು ನಿನ್ನದು? ಇಷ್ಟು ಒಳ್ಳೆಯ ಸಂಬಂಧವನ್ನು ಪಟಕ್ಕನೆ ಬಿಡುವುದುಂಟೆ? ಸ್ವಲ್ಪ ನಿಧಾನಿಸು. ನಿನ್ನ ಅಣ್ಣನಿಗೆ ಹಣ ತರುವಂತೆ ಕಾಗದ ಬರೆದಿದ್ದೇನೆ" ಎಂದಳು ಅವನ ತಾಯಿ.

ಆ ಮಾತು ಕೇಳಿ ತಮ್ಮನು ಕೋಪದಿಂದ ಗಂಟಲು ಹರಿಯುವಂತೆ, "ನನಗೆ ಹೇಳದೆ ಅವನಿಗೇಕೆ

ಸಹಾಯ ಮಾಡಬೇಕಪ್ಪ. ದೊಡ್ಡವನಾದ್ದರಿಂದ ನೀನೇ ತಮ್ಮನ ವಿಷಯದಲ್ಲಿ ರಾಜಿಗೆ ಮುಂದುವರಿಯಬೇಕು. ಈ ಕಾಗದ ನೋಡಿದ ಕೂಡಲೇ, ನೀನು ಹುಷಾರಾಗಿದ್ದರೆ ಹಣ ತೆಗೆದುಕೊಂಡು ಹೊರಟು ಬಾ. ಇಲ್ಲಿ ನಾವು ಮತ್ತೊಂದು ಮನೆಗೆ ಬದಲಾಯಿಸಿದ್ದೇವೆ. ಈ ಕಾಗದ ಕೂಡಾ ಕೈಯಲ್ಲಿದ್ದರೆ ಮನೆಯನ್ನು ಸುಲಭವಾಗಿ ಕಂಡುಹಿಡಿಯಬಹುದು. ಆರೋಗ್ಯ ಸುಧಾರಿಸಿ, ನೀನು ಖಂಡಿತಾ ಬರುವಿಯೆಂದು ನಂಬಿದ್ದೇನೆ." ಹೀಗೆ ಜಾನಕಮ್ಮ ಎಂಬ ತಾಯಿ ಬರೆದಿದ್ದಳು.

ಈ ಕಾಗದದಿಂದ ಜಗನ್ನಾಥನಿಗೆ ಆ ಮನುಷ್ಯನ ಸಮಾಚಾರವೆಲ್ಲಾ ಗೊತ್ತಾಯಿತು. ಅವನು ಹೆಂಡತಿಯೊಂದಿಗೆ "ಪಾಪ! ಇವನ ತಮ್ಮನ ಮಗಳ ಮದುವೆಗೆ ಹಣ ತೆಗೆದುಕೊಂಡು ಹೊರಟಿದ್ದಾನೆ. ನಡುದಾರಿಯಲ್ಲಿ ಯಮದೂತರು ಎಳೆದುಕೊಂಡು ಹೋದರು. ಈ ಕಾಗದ ನನಗೆ ಸಿಕ್ಕಿದ್ದು ಒಳ್ಳೇದೇ

ಕಾಗದ ಬರೆದಿ? ಸತ್ತರೂ ಅಣ್ಣನ ಹಣ ಮುಟ್ಟಲಾರೆ. ಅವನ ಹಣದಿಂದ ನನ್ನ ಮಗಳಿಗೆ ಮದುವೆ ಮಾಡಲಾರೆ! ಹುಂ" ಎಂದನು.

"ಯಾಕೋ ಇಂಥ ಹಟ? ಸಣ್ಣದೊಂದು ಮಾತಿಗೆ ನೀವಿಬ್ಬರೂ ಹತ್ತು ವರ್ಷದಿಂದ ಮುಖ ಮುಖ ನೋಡದೇ ಇದ್ದೀರಿ! ರಾಧೆಯ ಲಗ್ನದ ನೆಪದಿಂದಾದರೂ ನೀವು ಹೊಂದಿಕೊಳ್ಳುವಿರಿ ಅಂತ ಆಸೆಪಟ್ಟೆನಲ್ಲೋ! ಈ ಸಮಯದಲ್ಲಿಯೂ ನಿನ್ನ ಮನಸ್ಸು ಕರಗದಿದ್ದರೆ, ನನ್ನ ಹೊಟ್ಟೆ ಸುಟ್ಟುಕೊಂಡೇ ಇರಬೇಕಾಯಿತಪ್ಪಾ!" ಎಂದಳು ತಾಯಿ ದುಃಖದ ಸ್ವರದಲ್ಲಿ.

ಈ ಸಮಯದಲ್ಲಿ ಜಗನ್ನಾಥನು ಬಾಗಿಲು ತಟ್ಟುತ್ತಾ "ಜಾನಕಮ್ಮ ಎಂಬವರ ಮನೆ ಇದೇ ಏನು?" ಎಂದು ಕೂಗಿ ಕೇಳಿದನು.



ಒಳಗಿನಿಂದ ನಲವತ್ತು ವಯಸ್ಸಿನ ಗೃಹಸ್ಥನೊಬ್ಬನು ಬಾಗಿಲು ತೆರೆದು, "ಹೌದು, ಇದೇ ಮನೆ. ಯಾರು ನೀವು? ಒಳಗೆ ಬನ್ನಿ" ಎಂದನು ಆಶ್ಚರ್ಯಪಡುತ್ತ.

ಜಗನ್ನಾಥನು ಒಳಗೆ ಹೋಗಿ ಕುರ್ಚಿಯಲ್ಲಿ ಕುಳಿತುಕೊಂಡು ಹಣದ ಚೀಲವನ್ನು ಮೇಜಿನ ಮೇಲಿಟ್ಟು, ಕಾಗದವನ್ನು ತಮ್ಮನ ಕೈಗೆ ಕೊಟ್ಟನು. ತಮ್ಮನು ಆ ಕಾಗದವನ್ನು ಓದಿ, "ಹೌದು, ಇದು ನನ್ನ ತಾಯಿ ಅಣ್ಣನಿಗೆ ಬರೆದ ಕಾಗದ. ತನಗೆ ಬರಲು ಮುಖವಿಲ್ಲದೆ ಇವರ ಹತ್ತಿರ ಹಣ ಮಾತ್ರ ಕಳುಹಿಸಿದ್ದಾನೆಂತ ಕಾಣುತ್ತೆ. ಮೊದಲು ಈ ಹಣದ ಚೀಲವನ್ನು ನನ್ನ ಕಣ್ಣೆದುರಿನಿಂದ ತೆಗೆದುಬಿಡಿ!" ಎಂದನು ಕೋಪದ ಮುಖದಿಂದ.

"ನಿಮ್ಮ ಅಣ್ಣ ಸ್ವತಃ ಬರುತ್ತಿದ್ದರು. ಆದರೆ ಅವರಿಂದ ಬರಲಾಗದೆ ಹೋಯಿತು. ಇನ್ನು ನೀವಿಬ್ಬರೂ ಅವರನ್ನು ಈ ಜನ್ಮದಲ್ಲೇ ನೋಡಲಾಗದೆ ಹೋಯಿತೆನ್ನಲು ದುಃಖವಾಗುತ್ತದೆ" ಎಂದು ಜಗನ್ನಾಥನು ನಡೆದ ಸಂಗತಿಯನ್ನೆಲ್ಲಾ ಆ ತಾಯಿ ಮಗಂದಿರ ಮುಂದೆ ಹೇಳಿದನು.

ಅದನ್ನೆಲ್ಲ ಕೇಳಿ ತಮ್ಮನ ಬಾಯಿಯಿಂದ ಮಾತೇ ಹೊರಡಲಿಲ್ಲ. ತಾಯಿಯಂತೂ ಅಳಲಿಕ್ಕೇ ಶುರು ಮಾಡಿದಳು. ಒಂದು ನಿಮಿಷದ ಮೇಲೆ ತಮ್ಮನು ಎರಡು ಕೈಗಳಿಂದಲೂ ತನ್ನ ಮುಖವನ್ನು ಮುಚ್ಚಿಕೊಂಡು, "ಅಣ್ಣಾ! ನನ್ನನ್ನು ಕ್ಷಮಿಸು! ಕ್ಷಮಿಸು! ಎಂದು ಬಿಕ್ಕಿದನು.

ಅವನ ಅಳುವನ್ನು ನೋಡಿ ಜಗನ್ನಾಥನು ಗಂಭೀರ ಸ್ವರದಲ್ಲಿ, "ಮನುಷ್ಯನು ಬದುಕಿರುವಾಗ ಅವನ ಬೆಲೆ ತಿಳಿಯುವುದಿಲ್ಲ. ನಿಮ್ಮ ಮೇಲೆ ಅಣ್ಣನಿಗೆ ಅಷ್ಟೊಂದು ಪ್ರೀತಿ ಇಲ್ಲದಿದ್ದರೆ, ದೇಹ ಸೌಖ್ಯವಿಲ್ಲದಿದ್ದರೂ ಹಣವನ್ನು ತೆಗೆದುಕೊಂಡು ಹೊರಡುತ್ತಾನೇನು? ನೀವು ಸೋದರ ಪ್ರೇಮಕ್ಕೆ ಇಷ್ಟರವರೆಗೂ ದೂರವಾಗಿದ್ದಿರಿ. ಇನ್ನು ಅದು ಬೇಕೆಂದರೂ ಸಿಕ್ಕಲಾರದು" ಎಂದನು.

ಈ ಮನೆಯಿಂದ ಹೊರಡುವ ಅಳುವನ್ನು ಕೇಳಿ ನೆರೆಕರೆಯವರು ಅಲ್ಲಿಗೆ ಬಂದರು. ಅಷ್ಟರಲ್ಲಿ, "ಏನಿದು ? ಏನಾಯಿತು ?" ಎನ್ನುತ್ತ ಸುಮಾರು ನಲವತ್ತೈದು ವಯಸ್ಸಿನವನೊಬ್ಬನು ಅಲ್ಲಿಗೆ ಬಂದನು.

ಅವನನ್ನು ನೋಡಿದ ಕೂಡಲೇ ತಾಯಿಯೂ, ತಮ್ಮನೂ ಅಳುವುದನ್ನು ಬಿಟ್ಟು, ಪಿಳಿ ಪಿಳಿ ಅವನನ್ನು ನೋಡಿದರು. ತಮ್ಮನು ಒಮ್ಮೆಗೇ ಅವನ ಬಳಿಗೆ ಹಾರಿ, "ಅಣ್ಣಾ ! ನೀನು ಬದುಕಿಯೇ ಇರುವಿಯಾ ? ನಾನೊಬ್ಬ ಮೂರ್ಖ ! ನಿನ್ನ ಒಳ್ಳೆಯ ಮನಸ್ಸನ್ನು ತಿಳಿದುಕೊಳ್ಳಲಾರದೆ ಹೋದೆ !" ಎಂದು ಅವನ ಕಾಲಿಗೆ ಬಿದ್ದು ನಮಸ್ಕರಿಸಿದನು. ತಾಯಿಯಂತೂ ಆನಂದದಿಂದ ಮೂಕಳಾಗಿ ಆನಂದಬಾಷ್ಪ ಸುರಿಸಿದಳು.

ಈಗ ಬಂದವನು ಸತ್ತು ಹೋದನೆಂದು ತಾನು ತಿಳಿದಿದ್ದ ನಾರಾಯಣನೆಂದು ಜಗನ್ನಾಥನಿಗೆ ಅರ್ಥವಾಗಿ ಬೆರಗು ಬಡಿದೆದ್ದನು.

ನಡೆದ ಸಂಗತಿಯನ್ನು ತಿಳಿದ ಮೇಲೆ ನಾರಾಯಣನು ನಕ್ಕು, "ನಾನು ಹಣ ತೆಗೆದುಕೊಂಡು ಮೊನ್ನೆಯೇ ಹೊರಟಿದ್ದೆ. ರಾಧೆಗೆ ಪಟ್ಟೇ ಸೀರೆ ಕೊಂಡುಕೊಳ್ಳೋಣವೆಂದು ಪೇಟೆಗೆ ಹೋದೆ. ಅಲ್ಲಿ ಬಡ ಮುದುಕನೊಬ್ಬ, ಅಯ್ಯಾಸ್ವಾಮಿ ಅಂತ ನನ್ನ ಬೆನ್ನು ಹಿಡಿದೇ ಇದ್ದ. ಅವನ ಮೇಲೆ ಕನಿಕರಪಟ್ಟು, ಹಣದ ಚೀಲ ಕೆಳಗಿಟ್ಟು ತೆರೆದು ಅವನಿಗೊಂದು ರೂಪಾಯಿ ಕೊಟ್ಟೆ. ನಾನು ಅಂಗಡಿಯಲ್ಲಿ ಸೀರೆಗಳನ್ನು ನೋಡುತ್ತಾ ಇರುವಾಗ, ಅವನು ನನ್ನ ಹಿಂದೆಯೇ ಬರುವುದನ್ನು ನೋಡಿ ನನಗೆ ಅನುಮಾನವಾಗದಿರಲಿಲ್ಲ. ನಾನು ಸೀರೆ ಆರಿಸಿಕೊಂಡು ಹಣಕ್ಕೋಸ್ಕರ ನೋಡುತ್ತೇನೆ, ಸೊಂಟದಲ್ಲಿದ್ದ ಹಣದ ಚೀಲ ಮಾಯವಾಗಿತ್ತು. ಆ ಮುದುಕನೂ ಕಾಣಲಿಲ್ಲ. ಹುಡುಕಿ ನೋಡಿದರೂ ಸಿಗಲಿಲ್ಲ ಆ ಕಳ್ಳ ಮುದುಕ. ನಾನು ಸೀರೆಯನ್ನು ಅಲ್ಲೇ ಇಟ್ಟು, ಮನೆಗೆ ಹೋಗಿ ಮತ್ತೆ ಹಣ ತೆಗೆದುಕೊಂಡು ಸೀದಾ ಹೊರಟು ಬಂದೆ. ಜಗನ್ನಾಥರ ಮನೆಯಲ್ಲಿ ಸತ್ತು ಹೋದದ್ದು ಆ ಕಳ್ಳ ಮುದುಕನೇ !" ಎಂದನು.

"ಆ ಕಳ್ಳ ಸತ್ತು ಉಪಕಾರವನ್ನೇ ಮಾಡಿದ. ಅವನ ಪುಣ್ಯದಿಂದ ನೀವು ಅಣ್ಣತಮ್ಮಂದಿರು ಒಟ್ಟಾದಿರಲ್ಲ !" ಎಂದಳು ತಾಯಿ ಸಂತೋಷದಿಂದ.

"ಇನ್ನು ನಾನು ಹೊರಡುತ್ತೇನೆ. ಆ ಕಳ್ಳನ ಸಂಸ್ಕಾರವಾಗಬೇಕಲ್ಲ ? " ಎನ್ನುತ್ತಾ ಜಗನ್ನಾಥನು ಎದ್ದನು. "ನಾವೂ ನಿಮ್ಮ ಸಹಾಯಕ್ಕೆ ಬರುತ್ತೇವೆ. ಮುಂದಿನ ತಿಂಗಳು ನಮ್ಮ ಮಗಳ ಮದುವೆಗೆ ನೀವೆಲ್ಲರೂ ಬರಬೇಕು !" ಎಂದು ಅಣ್ಣತಮ್ಮಂದಿರಿಬ್ಬರೂ ಹೇಳಿದರು. ತಮ್ಮನು ಜಗನ್ನಾಥನ ಜತೆಯಲ್ಲಿ ಹೊರಟನು.






## ೧೫

[ಶಿವದತ್ತನನ್ನು ಹುಡುಕುತ್ತಾ ಹೊರಟ ಸಮರಸೇನನು, ಒಂದು ಮಡುವಿನಲ್ಲಿ ಮೊಸಳೆಯ ಬಾಯಿಗೆ ಬೀಳಲಿರುವವರನ್ನು ಕಾಪಾಡಿದನು. ಅವರು ಅವನ ಜತೆಗಾರರೆಂದೂ ತಿಳಿಯಿತು. ಅವರ ಮೂಲಕ ವ್ಯಾಘ್ರದತ್ತನು ಹೋದ ದಿಕ್ಕು ತಿಳಿದು, ಆ ಕಡೆಗೆ ಹೋದಾಗ, ಒಂದು ಎಚ್ಚರಿಕೆಯ ಪತ್ರವು ಸಿಕ್ಕಿತು. ಆಗಲೇ ಗುಡ್ಡದ ಮೇಲಿನಿಂದ ಅವರ ಕಡೆಗೆ ಬಾಣಗಳು ಹಾರ ತೊಡಗಿದುವು]

ತಮ್ಮ ಸುಳಿವು ಹಿಡಿದು ಬಾಣಗಳನ್ನು ಪ್ರಯೋಗಿಸುವವರು ಯಾರೆಂದು ಯೋಚನೆ ಮಾಡುತ್ತಾ ಸಮರಸೇನನು ಬಗ್ಗಿ, ಕೂತು, ಕುಪ್ಪಳಿಸಿ ತಪ್ಪಿಸಿಕೊಂಡು ಹೋಗುವಾಗ, ಅವರು ಯಾರೆಂಬುದೂ ಬೇಗನೇ ಗೊತ್ತಾಯಿತು. "ವ್ಯಾಘ್ರದತ್ತರಿಗೆ ಜೈ! ವ್ಯಾಘ್ರಮಂಡಲಕ್ಕೆ ಜೈ!" ಎಂದು ಅವರು ಉಚ್ಚಕಂಠದಿಂದ ಆಗಾಗ ಬೊಬ್ಬಿಡುತ್ತಿದ್ದರು. ಅವರ ಉಚ್ಚ ಕಂಠಗಳ ಬೊಬ್ಬೆಗಳಿಗೆ ಗುಡ್ಡಗಳೂ ಗುಹೆಗಳೂ ಪ್ರತಿಧ್ವನಿ ಕೊಡುತ್ತಿದ್ದುವು.

ವ್ಯಾಘ್ರದತ್ತನ ಭಟರು ಗುಡ್ಡದ ಕಲ್ಲುಗಳ ಹಿಂದೆ ಅಡಗಿಕೊಂಡು ಸಮರಸೇನ ಮತ್ತು ಅವನ ಅನುಚರರ ಮೇಲೆ ಬಾಣಗಳನ್ನು ಹಾರಿಸುತ್ತಿದ್ದರು. ಅವರು ಸಮರಸೇನನ ಗುರುತು ಹಿಡಿದೇ ಬಾಣ ಪ್ರಯೋಗ ಮಾಡುವರೋ, ಶಿವದತ್ತನ ಕಡೆಯುವರೆಂದುಕೊಂಡಿರುವರೋ ಗೊತ್ತಾಗಲಿಲ್ಲ. ಹಾಗೆ ಬಾಣ ಪ್ರಯೋಗ ಮಾಡುತ್ತಾ ಮುಂದುವರಿಯುವ ಅವರಿಂದ ಜೀವದೊಂದಿಗೆ ತಪ್ಪಿಸಿಕೊಳ್ಳಬೇಕಾದರೆ ಒಂದೇ ಒಂದು ಮಾರ್ಗವಷ್ಟೇ ಸಮರಸೇನನಿಗೆ ಕಂಡಿತು. ಬಂಡೆಗಳ ಮರೆಯಲ್ಲಿ ಅಡಗಿ ಕುಪ್ಪಳಿಸಿ



ಹೊತ್ತು ಕಿವಿಗೊಟ್ಟು ಕೇಳುತ್ತಿರಲು ವ್ಯಾಘ್ರದತ್ತನ ಭಟರ ಕೂಗುಗಳು ಕ್ರಮವಾಗಿ ತಗ್ಗುತ್ತಾ ಹೋದುವು. ಅವರು ಏನನ್ನೋ ಹುಡುಕುತ್ತಾ ಬೇರೆ ದಿಕ್ಕಿಗೆ ತಿರುಗಿದರೆಂದು ಸಮರಸೇನನಿಗೆ ಗೊತ್ತಾಯಿತು. ಸದ್ಯ ದೇವರು ಕಾಪಾಡಿದನೆಂದು ಎಲ್ಲರೂ ಬಲವಾಗಿ ಉಸಿರುಬಿಟ್ಟರು.

ಆಗ ಹೊತ್ತು ಮೇಲೇರಿ ನಡುಮಧ್ಯಾಹ್ನ ವಾಗಿದ್ದರೂ ಕತ್ತಲೆಯ ಗುಹೆಯೊಳಗೆ ಅದೊಂದೂ ತಿಳಿಯಲಿಲ್ಲ. ಅವರೆಲ್ಲ ತಡವುತ್ತಾ ಮುಂದೆ ಮುಂದೆ ಹೋಗುತ್ತಿರಲು, ಗುಹೆಯ ಎರಡನೆಯ ತುದಿಯಿಂದ ಸಣ್ಣಗಿನ ಸೂರ್ಯಕಾಂತಿ ಕಾಣಿಸಿತು. ಅದು ಗುಹೆಯ ಎರಡನೇ ದ್ವಾರವೆಂದು ಅಂದು ಕೊಳ್ಳುತ್ತ, ಮತ್ತಿಷ್ಟು ಮುಂದೆ ನಡೆದು ಗುಹೆಯ ಆಚೆಯ ಬದಿಯಲ್ಲಿ ಹೊರಗೆಬಂದರು.

ಅಲ್ಲಿ ಕಣ್ಣಿಗೆಬಿದ್ದ ದೃಶ್ಯವು ಅತ್ಯದ್ಭುತವಾಗಿತ್ತು. ಶಿವದತ್ತನು ಚಿತ್ರಪಟದಲ್ಲಿ ಗುರುತಿಸಿದ ಶಿಥಿಲಗಳು ಅವರ ಇದಿರಿನಲ್ಲಿ ಪ್ರತ್ಯಕ್ಷವಾಗಿದ್ದುವು. ಯಾವುದೋ ಒಂದು ಮಹಾನಗರವೇ, ಭೂಕಂಪದಿಂದ ಸರ್ವನಾಶ ಹೊಂದಿದ ಹಾಗೆ, ದೊಡ್ಡ ದೊಡ್ಡ ಭವನಗಳ ಗೋಡೆಗಳು ಒಡೆದು ಮಗುಚಿಕೊಂಡಿದ್ದುವು. ಕೆಲವು ವಾಲಿಕೊಂಡಿದ್ದುವು. ಕೆಲವು ಕಂಬಗಳು ಬಾಗಿ ಕೊಂಡು ಸೀಳುಬಿಟ್ಟು ಯಾವ ಕ್ಷಣದಲ್ಲಿಯೂ ನೆಲಕ್ಕೊರಗುವ ಹಾಗೆ ಕಾಣುತ್ತಿದ್ದುವು. ಅಂಥವುಗಳ ನಡುವೆ ತಿರುಗಾಡುವುದೂ ಅಪಾಯವೇ !

ಇದು ಶಿವದತ್ತನು ಚಿತ್ರದಲ್ಲಿ ಗುರುತಿಸಿರುವ ಶಿಥಿಲ ನಗರವಹ್ನುದು ಸಂದೇಹವಿರಲಿಲ್ಲ. ಹಾಗಾದರೆ ಶಿವದತ್ತನು ಇಲ್ಲೇ ಎಲ್ಲೋ ಅಡಗಿಕೊಂಡಿರಬೇಕು. ತಾನು ತಪ್ಪು ತಪ್ಪಾಗಿ ನಡೆದು ಬಂದರೂ ದಿಕ್ಕು ತಪ್ಪಲಿಲ್ಲವೆಂದಾಯಿತು. ಇದೊಂದು ಕುಂಡಲಿನೀ ದೇವಿಯ ಕೃಪೆಯೇ ಸರಿ. ಆದುದರಿಂದ ಈಗ ಧೈರ್ಯಮಾಡಿ ಮುಂದುವರಿದು ಅವನನ್ನು

ಕೊಂಡೇ ತಪ್ಪಿಸಿಕೊಳ್ಳಬೇಕು. ತಾನು ಒಬ್ಬನಾದರೆ ಹೇಗಾದರೂ ತಪ್ಪಿಸಿಕೊಳ್ಳಬಹುದು. ಅನುಚರರು ಇರುವುದರಿಂದ, ಸಿಕ್ಕಿ ಬೀಳುವ ಹಾಗಾಗದಂತೆ, ಅವರನ್ನೂ ಸನ್ನೆಗಳಿಂದ ಎಚ್ಚರಿಸಬೇಕಾಗಿತ್ತು.

ಸಮರಸೇನನು ಮಾಡುವ ಹಾಗೆಯೇ ಅವನೊಂದಿಗಿದ್ದ ಅನುಚರರೂ ನಿಶ್ಶಬ್ದವಾಗಿ ಕಲ್ಲುಗಳ ಹಿಂದೆ ಅಡಗಿಕೊಂಡೇ ಇದಿರಿನಲ್ಲಿರುವ ಸುರಂಗದ ಗುಹೆಯ ಕಡೆಗೆ ಹೋದರು. ಆ ಸುರಂಗವು ಎಲ್ಲಿಗೆ ಒಯ್ಯುವುದೋ ಅದರಾಚೆಗೆ ಏನಿದೆಯೋ ಎಂಬ ಸಂದೇಹಗಳೊಂದೂ ಅವರ ಮುಂದೆ ಸುಳಿಯಲಿಲ್ಲ. ಹಾಗೆ ಸುಳಿದರೂ ಬೇರೆ ದಾರಿ ಇಲ್ಲದ್ದರಿಂದ ದೇವರೇ ಗತಿ ಎಂದುಕೊಂಡು ಹೋಗಬೇಕಾಗಿತ್ತು. ಮೊದಲು ಈ ವ್ಯಾಘ್ರದತ್ತನ ಕಡೆಯವರಿಂದ ತಪ್ಪಿಸಿಕೊಳ್ಳುವುದೇ ಅವರ ಗುರಿ.

ಕಡೆಗೆ ಅವರೆಲ್ಲರೂ ಒಂದು ಕತ್ತಲೆಯ ಗುಹೆ ಯೊಳಗೆ ನುಗ್ಗಿದರು. ಅಲ್ಲಿ ಹುದುಗಿ ಸ್ವಲ್ಪ

ಹುಡುಕಬೇಕೆಂದು ಸಮರಸೇನನು ನಿಶ್ಚಯಿಸಿದನು. ಅವನೊಂದಿಗಿದ್ದ ಸೈನಿಕರಿಗಂತೂ ಯಾವುದೋ ಸ್ವಪ್ನ ಲೋಕಕ್ಕೆ ಬಂದವರಂತಾಗಿ, ಮೈಮರೆತು ನಿಂತಿದ್ದರು.

"ಮುಂದೆ ನಡೆಯಿರಿ" ಎಂದು ಸಮರಸೇನನು ಹೇಳುವಷ್ಟರಲ್ಲಿ ಆ ಪ್ರದೇಶವೆಲ್ಲಾ ದೊಡ್ಡದೊಂದು ಶಂಖನಾದದಿಂದ ತುಂಬಿಹೋಯಿತು. ಸಮರ ಸೇನಾದಿಗಳು ನಿಂತಲ್ಲೇ ತಟಸ್ಥರಾದರು. ಶಂಖನಾದ ವನ್ನನುಸರಿಸಿ ಕೂಗುಗಳೂ, ಘೋಷಣಧ್ವನಿಯೂ ಹೊರಟುವು. ಸುಮಾರು ಐವತ್ತು ಅರವತ್ತು ಮಂದಿ ಭಟರೊಂದಿಗೆ, ವ್ಯಾಘ್ರದತ್ತನು ಆ ಶಿಥಿಲ ಭವನಗಳ ಕಡೆಗೇ ಬರುತ್ತಿದ್ದನು. ಅವರ ರೀತಿಯಲ್ಲಿ ಗೆಲುವಿನ ಭಾವವಿದ್ದಿತು. ಅವರು ಯಾವುದೋ ಇನ್ನೊಂದು ಗುಹೆಯೊಳಗಿನಿಂದ ಅಲ್ಲಿಗೆ ಬಂದಿರಬೇಕು. ಅಂತಹ ಗುಪ್ತ ಸುರಂಗ ಮಾರ್ಗ ಗಳು ಇನ್ನೂ ಬೇರೆ ಇವೆಯೋ ಏನೋ? ಅಂತಹು ದೊಂದರಲ್ಲಿ ಶಿವದತ್ತನು ಅಡಗಿರಲೂಬಹುದು!

ಸಮರಸೇನನು ತನ್ನ ಸೈನಿಕರಿಗೆ ಎಚ್ಚರಿಕೆಯನ್ನು ಸೂಚಿಸಿ, ವ್ಯಾಘ್ರದತ್ತಾದಿಗಳು ಯಾವ ಕಡೆಗೆ ಹೋಗುವರೆಂಬುದನ್ನು ಗಮನಿಸಿದನು. ಅವರಾರಿಗೂ ಸಮರಸೇನನ ಗೊಡವೆಯೇ ಇದ್ದಂತೆ ಕಾಣಲಿಲ್ಲ. ದೊಡ್ಡ ವಿಜಯದ ನಡಿಗೆಯಾಗಿತ್ತು ಅವರದು.

ವ್ಯಾಘ್ರದತ್ತನು ತಾನು ಸಾಧಿಸಬೇಕಾದ ಮಹಾ ಕಾರ್ಯವನ್ನು ಸಾಧಿಸಿಕೊಂಡವನ ಹಾಗೆ ಭಟರ ಮುಂದಿನಿಂದ ಧೀರತನದಿಂದ ನಡೆಯುತ್ತಿದ್ದನು. ಭಟರು ನಗುತ್ತ ಕೆಲೆಯುತ್ತ, ಉತ್ಸಾಹದಿಂದ ಕೂಗುತ್ತ ಕೆಲವರು ಕುಣಿಯುತ್ತ ಹಾಡುತ್ತ, ಕೈತಟ್ಟುತ್ತ. ಕುಪ್ಪಳಿಸುತ್ತ ಸಾಗುತ್ತಿದ್ದರು.

ಶಿವದತ್ತನು ಎಲ್ಲಿ ಅಡಗಿರುವನೆಂಬುದನ್ನು ತಿಳಿದು ವ್ಯಾಘ್ರದತ್ತನು ಅವನನ್ನು ಬಂದಿಯಾಗಿ ಹಿಡಿದನೇನೋ ಎಂಬ ಸಂದೇಹವೆದ್ದಿತು ಸಮರ ಸೇನನಿಗೆ. ಆದರೆ ಆ ಭಟರ ನಡುವೆ ಬಂದಿಯಾದವ ನಾವನೂ ಕಾಣಲಿಲ್ಲ. "ಹಾಗಾದರೆ ಬಹುಶಃ ಶಾಕ್ತೇಯನ ಮಹಾಶಕ್ತಿಯ ತ್ರಿಶೂಲವು ಎಲ್ಲಿರು






ವುದೆಂದು ವ್ಯಾಘ್ರದತ್ತನಿಗೆ ಗೊತ್ತಾಗಿರಬೇಕು. ಅದಕ್ಕೇ ಇಷ್ಟು ಆನಂದ !" ಎಂದುಕೊಂಡನು ಸಮರಸೇನ.

ವ್ಯಾಘ್ರದತ್ತನು ಆ ಶಿಥಿಲ ನಗರ ಪ್ರದೇಶದಲ್ಲಿ ಯಾವುದೋ ಒಂದು ಸ್ಥಳವನ್ನು ಗುರುತಿಸಿದಂತೆ, ತನ್ನ ಅನುಚರರಿಗೇನೋ ವಿವರಿಸುತ್ತ, ಹೀಗೆ ಹಾಗೆ ಎಂದು ಬೆರಳಿನಿಂದ ಸೂಚಿಸುತ್ತ, ಕರೆದೊಯ್ಯುತ್ತಿದ್ದನು.

ಅದನ್ನು ನೋಡಲೇಬೇಕೆಂದುಕೊಂಡು ಸಮರ ಸೇನನು ಶಿಥಿಲ ಭಾಗಗಳ ಕಲ್ಲುಗುಪ್ಪೆಗಳ ಹಿಂದೆ ಅಡಗಿಕೊಂಡೇ ತನ್ನ ಸೈನಿಕರೊಂದಿಗೆ ಹೋಗಿ ಹೋಗಿ ದೊಡ್ಡದೊಂದು ಭವನದ ಪ್ರಾಂಗಣವನ್ನು ತಲಪಿದನು. ಅಲ್ಲಿ ಮಾಲಿಕೊಂಡಿದ್ದ ಒಂದು ಒಡೆದ ಕಂಬದ ಮರೆಯಲ್ಲಿ ಇದ್ದು ವ್ಯಾಘ್ರದತ್ತನ ಕಡೆಗೆ ನೋಡತೊಡಗಿದನು.

ಮುಂದೆ ನಡೆಯುತ್ತಿದ್ದ ವ್ಯಾಘ್ರದತ್ತನು, ತಟ್ಟನೆ ಒಂದು ಕಡೆಯಲ್ಲಿ ನಿಂತು, "ನನ್ನ ಪ್ರಿಯ ವ್ಯಾಘ್ರ ಯೋಧರೇ ! ನಮ್ಮ ಶ್ರಮವು ಫಲಿಸುವ ಸಮಯ ಹತ್ತಿರವಾಯಿತು. ನಿಮ್ಮಲ್ಲಿ ಪ್ರತಿಯೊಬ್ಬನನ್ನೂ ಒಂದೊಂದು ದೇಶಕ್ಕೆ ರಾಜನನ್ನಾಗಿ ಮಾಡುತ್ತೇನೆಂದು ನಾನು ಮಾತುಕೊಟ್ಟಿದ್ದೇನಷ್ಟೆ ? ಆ ವಾಗ್ದಾನವನ್ನು ನಡೆಸುವ ವೇಳೆ ಸಮೀಪಿಸುತ್ತಾ ಇದೆ. ಈಗ ನಿಮಗೊಂದು ಮುಖ್ಯ ವಿಷಯ ಹೇಳಬೇಕಾಗಿದೆ. ನೀವು ಈ ನಿಮಿಷದಲ್ಲಿ ಒಂದು ಸಾಹಸ ಕಾರ್ಯವನ್ನು ಮಾಡಬೇಕಾಗಿದೆ. ಮಾಡುವಿರೆಂಬ ನಂಬಿಕೆ ನನಗಿದೆ. ಮಾಡುವಿರಷ್ಟೆ ?" ಎಂದನು ಗಂಭೀರವಾಗಿ.

"ಓ ! ನಾವು ಎಂತಹ ಸಾಹಸ ಮಾಡಬೇಕಾದರೂ ತಯಾರು ! ನಿಮ್ಮ ಬಾಯಿಯಿಂದ ಏನು ಬಂದರೂ ನಾವು ತಯಾರು ! ಅದೇನೆಂದು ಅಪ್ಪಣೆ ಮಾಡಿರಿ !" ಎಂದು ಭಟರು ಕೂಗಿ ಹೇಳಿದರು.

ವ್ಯಾಘ್ರದತ್ತನು ಮಂದಹಾಸ ಬೀರುತ್ತ, "ಸ್ವಾಮಿ ಭಕ್ತರೆಂದರೆ ನೀವೇ ಸರಿ ! ನಿಮ್ಮ ಬಯಕೆಗಳು ಇನ್ನು ಸ್ವಲ್ಪ ಹೊತ್ತಿನಲ್ಲೇ ನೆರವೇರುತ್ತವೆ. ಅದೋ, ಅಲ್ಲಿ ಇದಿರಿನಲ್ಲಿ ಕಾಣುವ ಭವನವನ್ನು ನೋಡಿರಿ. ಅದರ ಸಿಂಹದ್ವಾರವು ಮುರಿದು ಕಲ್ಲುಗಳಿಂದ ಮುಚ್ಚಿಹೋಗಿದೆ. ನೀವು ಅಲ್ಲಿ ಅಡ್ಡವಾಗಿರುವ ಕಲ್ಲುಗಳನ್ನೂ, ಮುರಿದ ಕಂಬಗಳನ್ನೂ ತೊಲಗಿಸಿ ದಾರಿಯನ್ನು ಸರಿಮಾಡಿರಿ. ನಾವು ಶೋಧಿಸಿ ತೆಗೆಯಬೇಕಾದ ಅಮೂಲ್ಯವಾದ ಆ ವಸ್ತು ಆ ಭವನದಲ್ಲೇ ಇದೆ. ಅದೊಂದು ಸಿಕ್ಕಿಬಿಟ್ಟರೆ ನೀವು ಒಬ್ಬೊಬ್ಬರೂ ಒಂದೊಂದು ದೇಶದ ರಾಜರೇ" ಎಂದನು.

ವ್ಯಾಘ್ರದತ್ತನು ಹೀಗೆ ಹೇಳಿದ ಕೂಡಲೇ ಭಟರಿಗೆ ಎಲ್ಲಿಲ್ಲದ ಉತ್ಸಾಹವೆದ್ದಿತು. ಅವರು ಚಿತ್ರ ವಿಚಿತ್ರವಾದ ಧ್ವನಿಯನ್ನೂ, ರಾಗಗಳನ್ನೂ ಎಬ್ಬಿಸಿ, ಒಬ್ಬರನ್ನೊಬ್ಬರು ಎಚ್ಚರಿಸುತ್ತ, ಹುರುಡಿಸುತ್ತ, ದಿಮ್ಮಿ, ಪಿಕಾಸಿ, ಗುದ್ದಲಿಗಳನ್ನು ಪ್ರಯೋಗಿಸುತ್ತ ದೊಡ್ಡ ದೊಡ್ಡ ಬಂಡೆಗಳನ್ನು ಆಚೆಗೆ ಉರುಳಿಸುತ್ತ ಕೆಲಸಕ್ಕೆ ತೊಡಗಿದರು.



ಆ ಭಟರು ದುರಾಶೆಯ ಉತ್ಸಾಹಾವೇಶದಲ್ಲಿ ಮುಳುಗಿ, ಬರಲಿರುವ ಅಪಾಯುವನ್ನು ತಿಳಿಯದಾದರು. ಶಿಥಿಲವಾಗಿ ಬೀಳುತ್ತಲಿದ್ದ ಆ ಭವನದ ಗೋಡೆಗಳೂ ಸ್ತಂಭಗಳೂ ಕೆಳಗಿನ ರಾಶಿಗಳ ಆಧಾರ ತಪ್ಪಿದ ಕೂಡಲೇ ಯಾವ ಕ್ಷಣಕ್ಕೂ ಬೀಳುವುದು ಖಂಡಿತವೆಂದು ಸಮರಸೇನನಿಗೆ ತಿಳಿಯಿತು. ಅದರ ಬುಡದಲ್ಲಿ ಎಷ್ಟು ಜನರು ಹತರಾಗುವರೋ ಎಂದು ನಿರೀಕ್ಷಿಸ ತೊಡಗಿದನು.

ವ್ಯಾಘ್ರದತ್ತನಿಗೂ ಅದು ಗೊತ್ತಿರಬೇಕು. ಅವನು ದೂರದೂರವೇ ನಿಂತು ಕಲ್ಲುಗಳನ್ನು ಎಬ್ಬಿಸಿ ದೂರಮಾಡುವ ಭಟರಿಗೆ ಇನ್ನಿಷ್ಟು ಉತ್ಸಾಹಪಡಿಸುತ್ತಿದ್ದನು. ಅವನು ತಲೆತಿರುಗಿಸಿ ಆಚೆಗೂ ಈಚೆಗೂ ಪರಿಕಿಸುವುದನ್ನು ನೋಡಿ, ಆ ದುಷ್ಟನು ಬೇಕೆಂತಲೇ ಅವನ ಭಟರನ್ನೇ ಬಲಿಗೊಡುವ ಕೆಲಸ ಮಾಡುವನೆಂದು ಗೊತ್ತಾಗುತ್ತಿತ್ತು. ವ್ಯಾಘ್ರದತ್ತನ ಆಜ್ಞೆಯನ್ನು ಅತ್ಯಂತ ವಿಶ್ವಾಸದಿಂದ ಭಟರು ಪಾಲಿಸುತ್ತಿದ್ದಾರೆ. ಯಾವ ಗೋಡೆಯೋ ಕಂಬವೋ ಬೀಳಲಿದೆ. ಈ ವ್ಯಾಘ್ರದತ್ತನು ಎಂತಹ ಘಾತುಕನೋ! ಪಾಪದ ಭಟರಿಗೆ ಅದು ತಿಳಿಯುವುದಿಲ್ಲವಲ್ಲಾ!

ವ್ಯಾಘ್ರದತ್ತನು ನರಬಲಿಗಾಗಿಯೇ ಈ ಭಟರನ್ನು ಕರೆದುಕೊಂಡು ಬಂದ ಹಾಗಿದೆ. ಸಮರಸೇನನಿಗೆ ಆ ದುರ್ಭಾಗ್ಯದ ಭಟರ ಮೇಲೆ ಕರುಣೆಯುಂಟಾದರೂ ಅವನೇನೂ ಮಾಡುವಂತಿಲ್ಲ. ನೋಡುತ್ತಿದ್ದಂತೆ ಸಿಡಿಲ್ದನಿಯೊಂದಿಗೆ ಆ ಭವನವು ಒಮ್ಮೆಗೇ ಕುಸಿದುಬಿತ್ತು. ಅದರಡೆಯಲ್ಲಿ ಸಿಕ್ಕಿ ವ್ಯಾಘ್ರದತ್ತನ ಭಟರಲ್ಲಿ ಅನೇಕರು ಹಾಹಾಕಾರ ಮಾಡುತ್ತಾ ಸತ್ತುಹೋದರು. ಕೆಲವರು ಮಾತ್ರ ಬಲವಾದ ಗಾಯಗಳಿಂದ ಪ್ರಾಣ ಉಳಿಸಿಕೊಂಡು ಏಳುತ್ತಾ ಆರ್ತನಾದಮಾಡಿದರು. ಕೆಲವರು ಅರೆಜೀವಿಗಳಾಗಿ ಏಳಲಾಗದೆ ಎಡೆಯಲ್ಲಿ ಸಿಕ್ಕಿಕೊಂಡರು.

ಈ ಭಯಂಕರ ಘಟನೆ ಕಣ್ಣುಮುಚ್ಚಿ ಬಿಡಿಸುವುದರೊಳಗೇ ನಡೆದುಬಿಟ್ಟಿತು. ಪ್ರಾಣದೊಂದಿಗೆ ಉಳಿದವರನ್ನು ಕರೆದುಕೊಂಡು ವ್ಯಾಘ್ರದತ್ತನು ಸ್ವಲ್ಪದೂರ ಹೋಗಿ ನಿಂತನು. ತನ್ನನ್ನು ನಂಬಿದ ಅನೇಕ ಭಟರು ದುರ್ಮರಣ ಹೊಂದಿದುದನ್ನು ನೋಡಿ, ವ್ಯಾಘ್ರಧತ್ತನಿಗೆ ಇರುವ ಕಚ್ಚಿದ ಹಾಗೂ ಆಗಲಿಲ್ಲ. ಅರೆ ಸತ್ತವರ ಗೊಡವೆಗೂ ಹೋಗಲಿಲ್ಲ.

ಉಳಿದ ಭಟರಿಗೆ ಸಮಾಧಾನ ಆಗುವ ಹಾಗೆ ವ್ಯಾಘ್ರದತ್ತನು "ಈಗ ಬದುಕಿದವರೆಲ್ಲಾ ಪುಣ್ಯವಂತರು. ಈಗ ನಡೆದುದು ಆ ಪರೀಕ್ಷೆಯೇ! ಭಾಗ್ಯ ಸಿಕ್ಕಿದರೂ ಅನುಭವಿಸುವ ಯೋಗ್ಯತೆ ಇಲ್ಲದವರೇ ಸತ್ತರು. ನೀವೇ ನಿಜವಾದ ಅದೃಷ್ಟಶಾಲಿಗಳು! ಪುಣ್ಯವಂತರು. ಸತ್ತವರಿಂದ ವ್ಯಾಘ್ರೇಶ್ವರೀ ದೇವಿಗೆ ಏನೋ ಅಪಚಾರವಾಗಿದೆ. ಇನ್ನು ನಮಗೆ ಯಾವ ಭಯವೂ ಇಲ್ಲ. ಧೈರ್ಯವಾಗಿರಿ!" ಎಂದು

వ్యాఘ్రదత్తుడు, తన్న కైయల్లిద్ద ఒందు పటవన్ను అవరిగె తోరిసి, "అద్భుతవాద శక్తి మహిమె గళిరువ శాక్తేయన త్రిశూలవిరువ స్థళవన్ను ఈగ నిమగెల్లరిగూ హేళుత్తేనె. అదర ప్రభావ దింద ఈగ ఉళిదిరువ నావు మాత్ర ఈ ప్రపంచక్కే చక్రవర్తిగళాగబహుదు. ఆ త్రిశూల విరువ జాగ ఈ పటదల్లి స్పష్టవాగి కాణుత్తదె. ఈ సింహద్వారదల్లి ప్రవేశిసి హోదరె ఆనెగళ వన బరుత్తదె. ఆనెగళ వనదల్లి, విష వృక్షక్కె నూరు గజగళష్టు దూర మృతవీరర సమాధియ కెళగె గురుద్రోహియ అస్థిపంజరదొళగె శాక్తేయన త్రిశూలవన్ను అడగిసిడల్పట్టిదె ! అదు ఈ చిత్రపటదల్లి స్పష్టవాగిదె నోడిదిరా ? ఇన్ను నమగె యారూ ఇదిరిల్ల" ఎందను.




మరెయల్లిద్దు ఆ మాతుగళన్ను కేళి సమర సేననిగె ఆశ్చర్యదిందలూ, భయదిందలూ రోమాంచనవాయితు. యావ మహాశక్తియ త్రిశూలక్కాగి ఆ మంత్ర ద్వీపదల్లి ఇష్టొందు కొలెగళూ, యుద్ధగళూ, అత్యాచారగళూ నడెయుత్తివెయో ఆ త్రిశూలవు కడెగె వ్యాఘ్ర దత్తనంతహ పరమ నీచనిగె లభ్యవాగలిదె ! హాగాగలేబారదు !

ఇదన్ను నోడుత్తా నింతిరువ తాను ఏను మాడబేకు ? హేగె తడెయబేకు ? ఆ శివ దత్తను ఏనాదను ? అవనిగె త్రిశూలవు ఎల్లిరువుదెందు గొత్తో ? ఒందు వేళె అవనూ తన్న హాగె ఇల్లెల్లాదరూ హొంచి కొండిరువనె ? తాను కేవల ఆరు మంది సైనిక రొందిగె వ్యాఘ్రదత్తనన్ను ఇదిరిసువుదు క్షేమ వాదీతె? ఘాతవాదీతే?. ఈ సందర్భవన్ను సరి గొళిసబేకాదవళు కుండలినీదేవియే సరి !

సమరసేననిగె ఏనన్నూ నిర్ణయిసలాగదె హోయితు. ఒందుసారి ఆ త్రిశూలవు వ్యాఘ్ర దత్తన కైగె సిక్కితెందరె ఆమేలె అవనన్ను ఇదిరిసువుదు యారిందలూ సాధ్యవాగదు. మంత్ర తంత్రగళల్లి సాటి ఇల్లదవనెందు భావిస ల్పడువ ఏకాక్షీ, చతుర్నేత్రరు కూడా ఇవనిగె దాసోహం అన్నబేకాదీతు. ధనరాశియింద తుంబిద నావెయూ అదన్ను కాపాడువ నాగకన్యెయూ ఈ దుష్ట వ్యాఘ్రదత్తన వశవాగి బిట్టరె కేళువుదే బేడ, ఇవన అట్టహాసవన్ను ! లోకనాశవే నిజ.

ఇంతహ ఆపత్తిన కాలదల్లి తనగె సహాయ మాడబల్లవను చతుర్నేత్రనొబ్బన హొరతు బేరె యారూ ఇల్ల. ఆ చతుర్నేత్రనిగాదరూ ఈ పరిస్థితి తిళియువుదు హేగె ? నాగకన్యెగాగి ప్రయత్న మాడువ అవనిగె, శాక్తేయన

ಮಹಾಶಕ್ತಿ ಹೊಂದಿದ ತ್ರಿಶೂಲದ ಸಂಗತಿ ಗೊತ್ತಿದೆಯೋ ಇಲ್ಲವೋ ? ಆ ತ್ರಿಶೂಲವನ್ನೊಂದು ಸಂಪಾದಿಸಿಕೊಳ್ಳಲು ಸಾಧ್ಯವಾದರೆ, ಮೊತ್ತ ದ್ವೀಪರಾಜ್ಯಗಳನ್ನು ಮಾತ್ರವಲ್ಲದೆ ಪ್ರಪಂಚವನ್ನೇ ಗೆದ್ದುಬಿಡಬಹುದು !

ಹೌದು. ವ್ಯಾಘ್ರದತ್ತನಿಗೆ ಆ ತ್ರಿಶೂಲದ ಮೇಲೆ ಅಷ್ಟು ನಂಬುಗೆ ಇರುವುದರಿಂದ, ಸಮರಸೇನನೂ ಅದನ್ನು ನಂಬಲೇ ಬೇಕಾಗಿದೆ.

ಹೀಗೆ ಸಮರಸೇನನ ಮನಸ್ಸಿನಲ್ಲಿ ಆಲೋಚನೆಗಳು ತೀವ್ರವಾಗಿ ಏಳುತ್ತಿರಲು, ವ್ಯಾಘ್ರದತ್ತನ ಗಂಟೆಯಂಥ ಶಬ್ದವು ಪುನಃ ಮಾರ್ಮೊಳಗಿತು : "ಕೇಳಿರಿ ! ನಾಳೆ ಮಹಾ ಪರ್ವದಿನ. ಅಮಾವಾಸ್ಯೆಯೂ ಆದಿತ್ಯವಾರವೂ ಕೂಡಿ ಬಂದಿದೆ. ಆದುದರಿಂದ ನಾವು ಈ ದಿನ ರಾತ್ರಿ ಇಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳೋಣ. ನಾಳೆ ರಾತ್ರಿ ಸರಿಯಾಗಿ ಒಂದು ಗಂಟೆಯ ಹೊತ್ತಿಗೆ ನಾವು ಆನೆಗಳ ವನವನ್ನು ಪ್ರವೇಶಿಸಬೇಕು. ಆಗ ಎಲ್ಲರೂ ಉತ್ಸಾಹದಲ್ಲಿರಬೇಕು."

ಹೀಗೆ ಹೇಳಿ ವ್ಯಾಘ್ರದತ್ತನು ಅಲ್ಲಿದ್ದ ಒಂದು ಬಂಡೇಗಲ್ಲಿನ ಮೇಲೆ ಕುಳಿತುಕೊಂಡನು. ಭಟರು ಕೂಡಾ ತಮ್ಮ ತಮ್ಮ ಆಯುಧಗಳನ್ನು ಕೆಳಗಿಟ್ಟು ಅವನ ಸುತ್ತಲೂ ವಲಯಾಕಾರದಲ್ಲಿ ಕುಳಿತರು.

ವ್ಯಾಘ್ರದತ್ತನ ಮಾತುಗಳಿಂದ ಸಮರಸೇನನಿಗೆ ಸ್ವಲ್ಪ ಆಶಾಭಾವವೆದ್ದಿತು. ಇನ್ನೂ ಇಪ್ಪತ್ತನಾಲ್ಕು ಗಂಟೆಗಳ ಅವಕಾಶವಿದೆ. ಆ ಸಮಯದಲ್ಲಿ ಯಾವುದೋ ಒಂದು ವಿಧವಾಗಿ, ವ್ಯಾಘ್ರದತ್ತನನ್ನು ಹತಮಾಡಬೇಕು. ಅವರೆಲ್ಲ ತೂಕಡಿಸಿಕೊಂಡಿದ್ದಾಗಲಾದರೂ ಸರಿಯೆ. ದುಷ್ಟದಮನಕ್ಕೆ ಧರ್ಮಾಧರ್ಮವೆಣಿಸಿಕೊಂಡಿದ್ದರೆ ಸಾಗದು. ಅದು ದೋಷವೇನೂ ಆಗದು. ಪ್ರಸ್ತುತ ನಾವು ಕೂಡಾ ತುಸು ದಣಿವಾರಿಸಿಕೊಳ್ಳೋಣ.

ಹೀಗೆಂದುಕೊಂಡು ಸಮರಸೇನನು ತಟಕ್ಕನೆ ಹಿಂದಕ್ಕೆ ತಿರುಗಿದನು. ಹಾಗೆ ತಿರುಗುವಾಗ ಅವನು ಆತುಕೊಂಡಿದ್ದ ಅರ್ಧ ಮುರಿದ ಕಲ್ಲಿನ ಕಂಬವು ದೊಡ್ಡ ಶಬ್ದದಿಂದ ಹೊರಳಿಬಿತ್ತು. ಸಮರಸೇನನೂ ಸೈನಿಕರೂ ತಪ್ಪಿಸಿಕೊಂಡು ಅತ್ತ ಹಾರಿದರು.

ಆ ಶಬ್ದವನ್ನು ಕೇಳಿದ ಕೂಡಲೇ ಏಟು ತಿಂದ ಹೆಬ್ಬುಲಿಯ ಹಾಗೆ ವ್ಯಾಘ್ರದತ್ತನು ಎದ್ದುನಿಂತನು. ಅವನೊಂದಿಗೆ ಅವನ ಭಟರು ಕೂಡಾ ಎದ್ದರು. ಏಳುವಾಗಲೇ ತಮ್ಮ ಆಯುಧಗಳನ್ನೂ ಎತ್ತಿಕೊಂಡಿದ್ದರು. ವ್ಯಾಘ್ರದತ್ತನ ದೃಷ್ಟಿ ಸಮರಸೇನನು ಅಡಗಿರುವ ಶಿಥಿಲ ಭವನದ ಮೇಲೆ ಬಿತ್ತು. ಅವನ ಹುಬ್ಬುಗಳು ಎತ್ತರಿಸಿದುವು. ಅವನು ಕೋಪದಿಂದ ಕೆರಳಿ ಕೆಂಡವಾದನು.

(ಇನ್ನೂ ಇದೆ)





# ಆದರ್ಶರಾಜ

ಸಮುದ್ರದ ತೆರೆಗಳನ್ನಾದರೂ ಲೆಕ್ಕಿಸುವಷ್ಟು ತಾಳ್ಮೆಯುಳ್ಳವನಾದ ರಾಜಾತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲಮೇಲೇರಿಸಿಕೊಂಡು ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವ ದೊಳಗಿನ ಬೇತಾಳವು ಮಾತಾಡಲು ತೊಡಗಿ, "ರಾಜಾ, ಪ್ರಪಂಚದಲ್ಲಿ ಕೆಲವರು ಸತ್ಕಾರ್ಯಗಳನ್ನು ಮಾಡಿ ಆದರ್ಶಪ್ರಾಯರಾಗಿರುವವರು ಇದ್ದಾರೆ. ಅಂಥವರಲ್ಲಿ ಒಬ್ಬನಾದ ಗುಣಸಿಂಹನೆಂಬವನು ನನ್ನ ನೆನಪಿಗೆ ಬರುತ್ತಾನೆ. ಅಂಥವನೊಂದಿಗೆ ನಿನ್ನನ್ನು ಹೋಲಿಸಲಾಗುವುದೋ ನೋಡಿಕೋ. ದಾರಿಯ ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ" ಎಂದು ಕಥೆಯನ್ನು ಮುಂದುವರಿಸಿತು.

ಹಿಂದೆ ಒಂದು ಕಾಲದಲ್ಲಿ ವಿದರ್ಭದೇಶವನ್ನು ಪಾಲಿಸಿಕೊಂಡಿದ್ದ ಜಯಸಿಂಹನಿಗೆ ಇಬ್ಬರು ಕುಮಾರ ರಿದ್ದರು. ಹಿರಿಯವನ ಹೆಸರು ವೀರಸಿಂಹ. ಕಿರಿಯ ವನ ಹೆಸರು ಗುಣಸಿಂಹ. ಹಿರಿಯನಾದ ವೀರಸಿಂಹ ನಿಗೆ ರಾಜಭೋಗಗಳ ಮೇಲೆ ಇರುವಷ್ಟು ಆಸಕ್ತಿ ರಾಜ ವ್ಯವಹಾರಗಳ ಮೇಲೆ ಇರಲಿಲ್ಲ. ಅವನ

ಬೇತಾಳಕಥೆಗಳು



ತಮ್ಮ ಗುಣಸಿಂಹನಿಗೆ ಚಿಕ್ಕಂದಿನಿಂದಲೂ, ರಾಜ್ಯ ಪಾಲನೆಯ ವಿಷಯಗಳ ಮೇಲೆಯೂ, ಕ್ಷಾತ್ರ ವಿದ್ಯೆಗಳ ಮೇಲೆಯೂ ತುಂಬಾ ಆಸಕ್ತಿಯಿದ್ದಿತು. ಅವನು ಮಂತ್ರಿ ಮಾಣಿಕ್ಯವರ್ಮನ ಹತ್ತಿರ ರಾಜನೀತಿಗಳನ್ನೂ, ಸೇನಾಧಿಪತಿ ಶೂರಸೇನನ ಬಳಿಯಲ್ಲಿ ಕ್ಷಾತ್ರ ವಿದ್ಯೆಗಳನ್ನೂ ಶ್ರದ್ಧೆಯಿಂದ ಕಲಿತು ತೇರ್ಗಡೆಯಾದನು. ಆದುದರಿಂದ ರಾಜ್ಯಪರಿಪಾಲನೆ ಅವನಿಗೆ ಕರತಲಾಮಲಕವಾಗಿತ್ತು. ಹೀಗೆ ಆ ಅಣ್ಣತಮ್ಮಂದಿರೊಳಗೆ ತುಂಬಾ ವ್ಯತ್ಯಾಸವಿದ್ದಿತು.

ಜಯಸಿಂಹರಾಜನು ವಾರಸರೀತಿಯಾಗಿ ಹಿರಿಯ ಮಗನಿಗೇ, ಅವನು ದುರ್ವ್ಯಸನಗಳಿಗೆ ಪಳಗಿದವನಾದರೂ, ಪಟ್ಟಗಟ್ಟಬೇಕೆಂದಿದ್ದನು. ಅದನ್ನು ಗಮನಿಸಿದ ಗುಣಸಿಂಹನು ತನ್ನ ಗುರುವಾದ ಮಂತ್ರಿಯನ್ನೂ, ಸೇನಾಧಿಪತಿಯನ್ನೂ ತನಗೆ ಅನುಕೂಲರನ್ನಾಗಿ ಮಾಡಿಕೊಂಡು, ಪಟ್ಟಾಭಿಷೇಕದ ಮುಂಚಿನ ದಿನ ರಾತ್ರಿ ತಂದೆಯನ್ನೂ ಅಣ್ಣನನ್ನೂ ಬಂಧಿಸಿ ಸೆರೆಮನೆಯಲ್ಲಿ ಹಾಕಿಸಿಬಿಟ್ಟನು. ಮರುದಿನ ತಾನೇ ಪಟ್ಟಾಭಿಷೇಕ ಮಾಡಿಸಿಕೊಳ್ಳುವುದಾಗಿಯೂ ಪ್ರಕಟಪಡಿಸಿದನು.

ಗುಣಸಿಂಹನಿಗೆ ಪಟ್ಟಾಭಿಷೇಕ ಸಮಾರಂಭವು ನಡೆಯಲು ತೊಡಗಿತು. ಯಾರೂ ಪ್ರತಿಭಟನೆ ತೋರಲಿಲ್ಲ. ಮುಹೂರ್ತ ವೇಳೆಯಲ್ಲಿ ಬ್ರಾಹ್ಮಣರು ಮಂತ್ರಗಳನ್ನು ಪಠಿಸುತ್ತ, ವಜ್ರಗಳ ಕಿರೀಟವನ್ನು ಅವನ ತಲೆಯಲ್ಲಿಡಲು ನೋಡಿದರು.

"ಏನಿದು ?" ಎಂದು ಕೇಳಿದನು ಗುಣಸಿಂಹ.

"ಪ್ರಭೂ ! ಇದು ಕೋಟಿಗಟ್ಟಲೆ ಬೆಲೆ ಬಾಳುವ ವಜ್ರಗಳ ಕಿರೀಟ. ತಲೆತಲಾಂತರಗಳಿಂದ ನಿಮ್ಮ ವಂಶದವರು ರಾಜ್ಯಪಾಲನೆ ಮಾಡಿದ ಮಹತ್ವದ ಕಿರೀಟ !" ಎಂದನು ಮಂತ್ರಿ.

"ಈ ವಜ್ರಗಳ ಕಿರೀಟ ತಲೇ ಮೇಲೆ ಇಲ್ಲದಿದ್ರೆ ರಾಜ್ಯ ಪಾಲನೆ ಮಾಡಲಿಕ್ಕೆ ಆಗುವುದಿಲ್ಲವೇನು ?" ಎಂದು ಗುಣಸಿಂಹನು ಕೇಳಿದನು.

ಮಂತ್ರಿಗೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಅವನು ಕಣ್ಣರಳಿಸಿ ನೋಡುತ್ತಿರಲು, ಗುಣಸಿಂಹನು ಪುನಃ "ಇವತ್ತಿನಿಂದ ರಾಜಭೋಗಗಳ ಹೆಸರಿನಲ್ಲಿ ಆಗುವ ವ್ಯಯವನ್ನೆಲ್ಲ ತಗ್ಗಿಸಿರಿ. ನಾನು ಕೂಡಾ ರಾಜಾಸ್ಥಾನದಲ್ಲಿ ಒಬ್ಬ ಉದ್ಯೋಗಸ್ಥನೇ ಆದುದರಿಂದ ನನಗೂ ತಕ್ಕುದೊಂದು ಸಂಬಳವನ್ನೂ ನಿರ್ಣಯಿಸಿರಿ ! ಆ ಸಂಬಳ ನನ್ನ ಖರ್ಚಿಗೆ ಸಾಕಾಗುವಷ್ಟು ಇದ್ದರೆ ಸಾಕು " ಎಂದನು.

ಅವನ ಮಾತು ಕೇಳಿ ಮಂತ್ರಿಯೂ, ಸಭೆಯಲ್ಲಿದ್ದವರೂ ಬೆರಗಾಗಿ ಹೋದರು.

ಆಮೇಲೆ ಗುಣಸಿಂಹನ ರಾಜಭಾರ ನಡೆಯ ತೊಡಗಿತು. ಅವನು ತನಗೆ ಬರುವ ಸಂಬಳದಿಂದ ನಿರಾಡಂಬರವಾಗಿರುತ್ತ, ಪ್ರಜೆಗಳ ಸಮಸ್ಯೆಗಳಿಗೆ ತಕ್ಕ ನಿವಾರಣೆಗಳನ್ನು ಯೋಜಿಸಿ ಒಳ್ಳೆಯ ರೀತಿಯಲ್ಲಿ ರಾಜ್ಯಪಾಲನೆ ಮಾಡುತ್ತ, ಸ್ವಲ್ಪ ಕಾಲದೊಳಗೇ

ರಾಜ್ಯವು ಸುಭಿಕ್ಷವಾಗುವಂತೆ ಮಾಡಿದನು. ಎಲ್ಲರೂ ಗುಣಸಿಂಹನನ್ನು ಮೆಚ್ಚುವವರೇ.

ಹೀಗಿರುವಾಗ ವಿದರ್ಭ ರಾಜ್ಯದ ಹೊರಗೆ ವಿರೂಪವೆಂಬೊಂದು ರಾಜ್ಯವಿತ್ತು. ಅದನ್ನು ಚಿತ್ರಸೇನನೆಂಬ ರಾಜನು ಪಾಲಿಸುತ್ತಿದ್ದನು. ಅವನ ಮಗನಾದ ವಿಜಯಸೇನನು ಎಲ್ಲಾ ವಿದ್ಯೆಗಳಲ್ಲಿಯೂ ಜಾಣನಾಗಿ ಯುವರಾಜ ಪಟ್ಟಕ್ಕೆ ಅರ್ಹನಾಗಲು, ವಿಜಯಸೇನನು ಅವನಿಗೆ ಯುವರಾಜ ಪಟ್ಟಾಭಿಷೇಕಮಾಡಿ ಹೀಗೆಂದನು :

"ಕುಮಾರಾ, ನಿನ್ನ ವಿದ್ಯೆಗಳೆಲ್ಲಾ ಪೂರ್ತಿಯಾಯಿಂತೆಂಬುದೇನೋ ನಿಜ. ಆದರೆ ರಾಜನಾಗಿರುವವನಿಗೆ ಶಾಸ್ತ್ರಜ್ಞಾನ ಮಾತ್ರವೇ ಸಾಲದು. ಅದರೊಂದಿಗೆ ಲೋಕಾನುಭವವೂ ಚೆನ್ನಾಗಿರಬೇಕು. ನೀನು ಕೆಲವು ತಿಂಗಳು ದೇಶಾಟನೆ ಮಾಡಿ, ನಿನಗೆ ಆದರ್ಶರಾದವರು ಯಾರಾದರೂ ಕಂಡರೆ, ಅವರ ಹತ್ತಿರ ಕೆಲವು ವಾರಗಳಿದ್ದು, ಪರಿಪಾಲನೆಯಲ್ಲಿರಬೇಕಾದ ಒಳಿತುಕೆಡುಕು ಸುಳಿವು ಸೂಕ್ಷ್ಮಗಳನ್ನು ತಿಳಿದು ಕೊಂಡು ಹಿಂದಿರುಗಿ ಬಾ" ಎಂದನು.

ತಂದೆಯು ಮಾತಿನ ಪ್ರಕಾರ ವಿಜಯಸೇನನು ದೇಶಾಟನೆಗೆ ಹೊರಟು, ದಾರಿಯಲ್ಲಿ ಇದಿರಾದ ರಾಜ್ಯಗಳನ್ನು ನೋಡುತ್ತ, ಅಲ್ಲಲ್ಲಿಯ ರಾಜರ ಗುಣಗಳನ್ನು, ಸ್ಥಿತಿಗತಿಗಳನ್ನು ಮನನ ಮಾಡುತ್ತ, ತೂಗಿನೋಡುತ್ತ ವಿದರ್ಭ ದೇಶಕ್ಕೂ ಬಂದನು. ವಿದರ್ಭ ದೇಶದ ಪ್ರಜೆಗಳು ಗುಣಸಿಂಹನನ್ನು ಕುರಿತು, ಅವನ ಪರಿಪಾಲನೆಯ ವಿಧಾನವನ್ನು ಕುರಿತು ತೃಪ್ತಿಯಿಂದ ಮಾತಾಡುವುದನ್ನು ಕೇಳಿ, ಗುಣಸಿಂಹನ ಬಳಿಗೇ ಹೋದನು. ತಾನು ಯಾರೆಂದೂ, ತನ್ನ ಮನಸ್ಸಿನಲ್ಲಿರುವ ಉದ್ದೇಶವೇನೆಂದೂ ಗುಣಸಿಂಹನೊಂದಿಗೆ ಹೇಳಿದನು.

ಗುಣಸಿಂಹನು ವಿಜಯಸೇನನನ್ನು ಅವನಿಗೆ ಇಷ್ಟ ಬಂದಷ್ಟರ ವರೆಗೆ ತನ್ನ ಆಸ್ಥಾನದಲ್ಲಿರಲು ಸಂತೋಷವಾಗಿ ಒಪ್ಪಿಕೊಂಡನು. ವಿಜಯಸಿಂಹನು ಅಲ್ಲಿ ಹದಿನೈದು ದಿನಗಳ ವರೆಗೆ ಇದ್ದು, ಗುಣಸಿಂಹನ ಅನುಜ್ಞೆ ಪಡೆದು ತನ್ನ ರಾಜ್ಯಕ್ಕೆ ಹಿಂದಿರುಗುವಾಗ



ಅವನ ಮುಖದಲ್ಲಿ ತುಂಬಾ ಸಂತೃಪ್ತಿ ಕಾಣಿಸಿತು. ಗುಣಸಿಂಹನೇ ತನಗೆ ಆದರ್ಶ ರಾಜನೆಂದು ತಂದೆಯೊಡನೆ ಹೇಳಿ, ರಾಜ್ಯಭಾರವನ್ನು ಕೈಕೊಂಡನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಪಟ್ಟ ಕಟ್ಟಿಕೊಂಡ ಮೇಲೆ, ರಾಜ್ಯಭಾರ ವಹಿಸಿಕೊಳ್ಳಬೇಕಾದ ವಿಜಯಸೇನನು ತಂದೆಯ ಮಾತಿನಂತೆ ಶ್ರಮ ವಹಿಸಿ ದೇಶಾಟನೆ ಮಾಡಿ ಗುಣಸಿಂಹನನ್ನು ಆದರ್ಶ ರಾಜನೆಂದು ಗುರುತಿಸಿಕೊಂಡದ್ದು ತಪ್ಪಲ್ಲವೇನು ? ರಾಜ್ಯದ ಆಶೆಯಿಂದ ತಂದೆಯನ್ನೂ ಅಣ್ಣನನ್ನೂ ಸೆರೆಮನೆಯಲ್ಲಿರಿಸಿ ಪಟ್ಟ ಕಟ್ಟಿಸಿಕೊಂಡ ಗುಣಸಿಂಹನು ಆದರ್ಶ ರಾಜ ಹೇಗಾಗುತ್ತಾನೆ ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದಿದ್ದರೆ ನಿನ್ನ ತಲೆಯೊಡೆದು ಸಾವಿರ ಹೋಳಾಗುತ್ತದೆಂದು ತಿಳಿ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಗುಣಸಿಂಹನು ರಾಜ್ಯದ ಆಶೆಯಿಂದ ತಂದೆಯನ್ನೂ, ಅಣ್ಣನನ್ನೂ ಸೆರೆಮನೆಗೆ ಹಾಕಿದನೆಂಬುದಕ್ಕೆ ಆಧಾರವೇ ನಿಲ್ಲ. ಅವರ ರೀತಿ ನೀತಿಗಳು ಪ್ರಜೆಗಳ ಕ್ಷೇಮಕ್ಕೆ ಒಳ್ಳೆಯದಲ್ಲವೆಂತಲೇ, ಪ್ರಜೆಗಳಿಗೆ ಸುಖ ಸಮೃದ್ಧಿಗಳನ್ನು ಒದಗಿಸಬೇಕೆಂತಲೇ ಅವನು ಹಾಗೆ ಮಾಡಬೇಕಾಯಿತು. ಅದಕ್ಕೆ ಯಾರೂ ವಿರೋಧಿಸಲೂ ಇಲ್ಲ. ಗುಣಸಿಂಹನು ರಾಜ್ಯಾಕಾಂಕ್ಷೆಯಿಂದಲೇ ಆ ಕೆಲಸ ಮಾಡಿದ್ದರೆ ರಾಜಭೋಗಗಳನ್ನು ಬಿಟ್ಟುಕೊಡುತ್ತಿರಲಿಲ್ಲ. ಪ್ರಜೆಗಳ ಸುಖ ದುಃಖಗಳ ಕಡೆಗೆ ಮನಸ್ಸು ಕೊಡುತ್ತಲೂ ಇರಲಿಲ್ಲ. ಅಷ್ಟು ಮಾತ್ರವಲ್ಲದೆ, ತಾನು ಹೆಚ್ಚಿನವನೆಂಬ ಭಾವವನ್ನು ಬಿಟ್ಟು, ತಾನೂ ಪ್ರಜೆಗಳಲ್ಲೊಬ್ಬನಾದರೆ ಪ್ರಜೆಗಳ ಸಮಸ್ಯೆಗೆ ಪರಿಹಾರ ಹುಡುಕುವುದು ಇನ್ನಷ್ಟು ಸುಲಭವಾಗುವುದೆಂಬ ನಂಬುಗೆಯಿಂದ, ತನಗೆ ಬರುವ ಸಂಬಳದಿಂದ ಸಾಮಾನ್ಯರಂತೆಯೇ ಇದ್ದಿದ್ದಾನೆ. ಹೀಗೆ ಪ್ರಜೆಗಳಿಗೆ ಸುಖ ಶಾಂತಿಗಳನ್ನುಂಟು ಮಾಡಿದವನಾದುದರಿಂದ ನಿಜಕ್ಕೂ ಅವನಲ್ಲಿ ಆದರ್ಶ ರಾಜನ ಲಕ್ಷಣಗಳೇ ಇವೆ. ತಂದೆಗೂ ಅಣ್ಣನಿಗೂ ದ್ರೋಹಮಾಡಿದುದು ಅವನ ವೈಯಕ್ತಿಕ ವಿಷಯವಾಗುತ್ತದೆ. ಅದು ಯಾರಿಗೂ ಮುಖ್ಯವಲ್ಲ. ರಾಜನಾಗಿ ಅವನು ಎಷ್ಟರಮಟ್ಟಿಗೆ ಪ್ರಜಾಸೇವೆ ಮಾಡುವನೆಂಬುದೇ ಮುಖ್ಯ. ಅವನು ಆದರ್ಶ ಪುತ್ರನಲ್ಲದಿದ್ದರೂ, ಆದರ್ಶ ಸಹೋದರನಲ್ಲದಿದ್ದರೂ ಆದರ್ಶ ರಾಜನೆನ್ನಲು ಏನೂ ಸಂದೇಹವಿಲ್ಲ. ಅಂತಲೇ ವಿಜಯಸೇನನು ಅವನನ್ನು ಆದರ್ಶನಾಗಿಟ್ಟುಕೊಂಡುದರಲ್ಲಿ ಯಾವ ತಪ್ಪೂ ಇಲ್ಲ".

ಹೀಗೆ ರಾಜನಿಗೆ ಮೌನಭಂಗವಾದ ಮರುಕ್ಷಣದಲ್ಲೇ ಬೇತಾಳವು ಶವ ಸಮೇತ ಮಾಯವಾಗಿ ಹೋಗಿ ಮರದಕೊಂಬೆಗೆ ಸೇರಿ ನೇತಾಡಿತು.





# ಗ್ರಹಣ ಸ್ನಾನ

ಒಂದು ಗ್ರಾಮದಲ್ಲಿ ನಾಗಭೂಷಣನೆಂಬವನು ಬಹು ದೊಡ್ಡ ಆಸ್ತಿವಂತನಾಗಿದ್ದನು. ಎಲ್ಲರೊಂದಿಗೂ ಸವಿಯಾಗಿ ಮಾತಾಡುವನು. ತನ್ನ ಸಂಗತಿಯನ್ನು ಹೇಳುವಾಗ, "ಹಸಿವಿಲ್ಲದವನೂ, ಸಾಲವಿಲ್ಲದವನೂ ಲೋಕದಲ್ಲಿ ಯಾರೂ ಇಲ್ಲ" ಎನ್ನುತ್ತ, ತಾನು ಹೆಸರಿಗೆ ದೊಡ್ಡ ಆಸ್ತಿವಂತನಾಗಿದ್ದರೂ ತನಗೂ ಅಷ್ಟಿಷ್ಟು ಸಾಲವು ಇದ್ದೇ ಇದೆ ಎನ್ನುವನು. ಆದರೆ ಯಾರಾದರೂ ಅಗತ್ಯವೆಂದು ಕೇಳಿದಾಗ ಹೆಚ್ಚಿನ ಬಡ್ಡಿಗೆ ಸಾಲಕೊಡುತ್ತಲೂ ಇದ್ದನು. ಆ ಬಡ್ಡಿಯಿಂದ ಇನ್ನಿಷ್ಟು ಹೆಚ್ಚುಗಳಿಸುತ್ತಲೂ ಇದ್ದನು.

ಒಂದು ಸಾರಿ ಅದೇ ಊರಿನಲ್ಲಿರುವ ಸೋಮನಾಥನೆಂಬ ಬಡರೈತನು ನಾಗಭೂಷಣನ ಹತ್ತಿರ ಸಾಲ ಕೇಳಲು ಬಂದನು. ಸೋಮನಾಥನಿಗೆ ಎರಡು ಎಕರೆ ಗದ್ದೆಗಳಿದ್ದುವು. ಆ ಗದ್ದೆಗಳು ನಾಗಭೂಷಣನ ಗದ್ದೆಗಳ ಪಕ್ಕದಲ್ಲೇ ಇದ್ದುದರಿಂದ, ಅದನ್ನು ಕೂಡಾ ತಾನೇ ವಶಪಡಿಸಿಕೊಳ್ಳಬೇಕೆಂದು ನಾಗಭೂಷಣನಿಗೆ ಬಹಳ ಕಾಲದಿಂದ ಮನಸ್ಸಿನೊಳಗಿತ್ತು. ಈಗ ಸಂದರ್ಭ ಬಂತೆಂದುಕೊಂಡನು. ಅಂತಲೇ ಅವನು ಸೋಮನಾಥನೊಂದಿಗೆ, "ಸೋಮಣ್ಣಾ, ಸಾಲ ಮಾಡದವರಾರಿದ್ದಾರೆ? ಅಗತ್ಯ ಬಿದ್ದುದರಿಂದ ನಾನು ನಗರದ ಸಾವುಕಾರ್ರ ಹತ್ತಿರ ದೊಡ್ಡ ಬಡ್ಡಿಗೆ ಸಾಲ ತಂದುಕೊಳ್ಳುವ ಸಂಗತಿ ನಮ್ಮ ಗ್ರಾಮದಲ್ಲಿ ಯಾರಿಗೂ ತಿಳಿಯದನ್ನು. ನೀನೇನೋ ಸಣ್ಣ ಸಾಲಕ್ಕೆ ಬಂದಿದ್ದೀ. ಹೇಗೆ ಇಲ್ಲವೆನ್ನಲಿ?" ಎಂದು ಹೇಳಿ, ಅವನ ಎರಡು ಎಕರೆ ಗದ್ದೆಗಳನ್ನು ಅಡವು ಹಾಕಿಸಿಕೊಂಡು, ಅವನು ಕೇಳಿದುದಕ್ಕಿಂತಲೂ ಸ್ವಲ್ಪ ಹೆಚ್ಚಿಗೇ ಸೇರಿಸಿ ಸಾಲಕೊಟ್ಟನು.

ಆಮೇಲೆ ಕ್ರಮವಾಗಿ ಎರಡು ವರ್ಷಗಳ ವರೆಗೆ ಕಾಲಸ್ಥಿತಿ ಒಳ್ಳೆಯದಾಗಿರಲಿಲ್ಲ. ಸರಿಯಾಗಿ ಮಳೆ ಬಾರದೆ, ಸೋಮನಾಥನ ಉಳಿದ ಹೊಲಗಳು ಒಣಗಿ ಹೋದುವು. ಇನ್ನು ಅವನಿಂದ ತನ್ನ ಸಾಲವನ್ನು ತೀರಿಸಲು ಸಾಧ್ಯವಿಲ್ಲವೆಂಬ ನಂಬುಗೆ ಯುಂಟಾದ ಮೇಲೆ ನಾಗಭೂಷಣನು ತನ್ನ ಸಾಲವನ್ನು ತೀರಿಸುವಂತೆ ಸೋಮನಾಥನನ್ನು ಒತ್ತಾಯಿಸ ತೊಡಗಿದನು. ಇನ್ನೊಂದು ವರ್ಷ ತಾಳುವಂತೆ ಸೋಮನಾಥನು ಎಷ್ಟೇ ಬೇಡಿಕೊಂಡರೂ ನಾಗಭೂಷಣನು ಕೇಳಲಿಲ್ಲ.

ವಿ. ಯಜ್ಞರಾಮಯ್ಯ

"ಇನ್ನೊಂದು ವರ್ಷದಲ್ಲಿ ಮಾತ್ರ ಮಳೆಬರುವುದೆಂಬ ನಂಬುಗೆ ಏನಿದೆ? ಪ್ರಾಣ ಹೋಗುವುದೂ, ಮಳೆಬರುವುದೂ ಮುಂದಾಗಿ ತಿಳಿದರೆ ಇಲ್ಲದ್ದೇನಿದೆ? ಅತ್ತ, ಕಡೆ ಸಾಲಗಾರರು ನನ್ನ ಕುತ್ತಿಗೇ ಮೇಲೆ ಕಾಲಿಟ್ಟು ಒತ್ತುತ್ತಿದ್ದಾರೆ. ನಿನ್ನದೇನೋ ಚಿಕ್ಕ ಸಾಲ. ನಾನು ಹತ್ತು ಎಕರೆ ಹೊಲಗಳನ್ನು ಅಡವು ಹಾಕಿ ಪೇಚಾಡಿಕೊಂಡಿದ್ದೇನೆ. ಇನ್ನು ತಡೆಯಲು ಸಾಧ್ಯವಿಲ್ಲ" ಎಂದನು ನಾಗಭೂಷಣ.

ತನ್ನ ಎರಡು ಎಕರೆ ಗದ್ದೆಗಳನ್ನು ನಾಗಭೂಷಣನು ಬಿಡುವ ಹಾಗಿಲ್ಲವೆಂದು ಸೋಮನಾಥನಿಗೆ ತಿಳಿಯಿತು. ಬೇರೆ ಉಪಾಯವಿಲ್ಲದೆ ಆ ಗದ್ದೆಗಳನ್ನು ನಾಗಭೂಷಣನಿಗೆ ಬಿಟ್ಟುಕೊಟ್ಟು ಆ ಋಣದಿಂದ ಮುಕ್ತನಾದನು. ನಾಗಭೂಷಣನಿಗೆ ದೊಡ್ಡದೊಂದು ಘನಕಾರ್ಯ ಸಾಧಿಸಿಕೊಂಡಷ್ಟು ಸಂತೋಷವಾಯಿತು. ಮುಂದೆ ಹತ್ತು ದಿನಗಳ ಮೇಲೆ ಸೂರ್ಯಗ್ರಹಣವು ಬಂದಿತು. ಮಿತ್ರರು ನಾಗಭೂಷಣನನ್ನು ಗ್ರಹಣ ಸ್ನಾನಮಾಡಲು ನದಿಗೆ ಬರುವಂತೆ ಕರೆದರು. ಅಲ್ಲಿ ಸೇರುವ ಭಿಕ್ಷುಕರಿಗೆ ಧರ್ಮ ಮಾಡಬೇಕಾಗಿ ಬರುವುದೆಂಬ ಭಯದಲ್ಲಿ, "ಬೇಡಯ್ಯ. ಆ ನದಿಯ ನೀರು ತಾನೇ ಕಾಲುವೆಯ ಮೂಲಕ ನಮ್ಮ ಕೇದಿಗೆ ಕೆರೆಗೂ ಬಂದು ಸೇರುತ್ತೆ? ಗ್ರಹಣ ಸ್ನಾನವನ್ನು ನಮ್ಮ ಕೇದಿಗೆ ಕೆರೆಯಲ್ಲೇ ಮಾಡಿದರೆ ಸಾಗದೇನು?" ಎಂದನು ನಾಗಭೂಷಣ.

ಹಣದ ವಿಷಯದಲ್ಲಿ ನಾಗಭೂಷಣನು ಎಂತಹ ಜಿಪುಣನೆಂಬುದನ್ನು ಬಲ್ಲ ಮಿತ್ರರು ನಗುತ್ತಾ ಹೊರಟು ಹೋದರು. ಸ್ವಲ್ಪ ಹೊತ್ತು ತಾಳಿದ ಮೇಲೆ ನಾಗಭೂಷಣನು ಕೇದಿಗೆ ಕೆರೆಯ ಕಡೆಗೆ ಹೊರಟನು. ಅಲ್ಲಿ ಸಾಧಾರಣವಾಗಿ ಸ್ನಾನಮಾಡುವ ಮೆಟ್ಟಲುಗಳ ಸಮೀಪದಲ್ಲಿ ಕೆಲವು ಭಿಕ್ಷುಕರಿರುವುದನ್ನು ನೋಡಿ, ಆ ಕೆರೆಯ ಇನ್ನೊಂದು ಬದಿಗೆ ಹೋದನು. ಅಲ್ಲಿ ಕೆಲವು ಮಂದಿ ಮುದುಕರು ಸ್ನಾನಮಾಡಿಕೊಂಡಿದ್ದರು.

ನಾಗಭೂಷಣನು ಭಿಕ್ಷುಕರ ಕಣ್ಣಿಗೆ ಬೀಳದಂತೆ ಅಲ್ಲಿರುವ ಒಂದು ಬಂಡೆಗಲ್ಲನ್ನು ಸುತ್ತಿಕೊಂಡು,



ಆದರ ಇಳಿಜಾರಿನಲ್ಲಿ ಇಳಿಯುವಾಗ, ಕಾಲುಜಾರಿ ಆಳವಾದ ನೀರಿಗೆ ಬಿದ್ದನು.

ಅವನಿಗೆ ಈಜು ಬಾರದುದರಿಂದ, ನೀರಿನಲ್ಲಿ ಮುಳುಗೇಳುತ್ತ "ರಕ್ಷಿಸೀ" ಎಂದು ಕೂಗಲು ತೊಡಗಿದನು. ಆ ಸಮಯದಲ್ಲಿ ಏನೋ ಕೆಲಸದ ಮೇಲೆ ನೆರೆಯ ಗ್ರಾಮಕ್ಕೆ ಹೋಗಿದ್ದ ಸೋಮನಾಥನು ಕೆರೆಯ ಬದಿಯಿಂದಾಗಿ ಬರುತ್ತ, ನಾಗಭೂಷಣನ ಕಂಠಸ್ವರವನ್ನು ಗುರುತಿಸಿ ಓಡಿ ಬಂದು ಕೆರೆಗೆಹಾರಿ, ನಾಗಭೂಷಣನನ್ನು ಬದಿಗೆ ಎಳೆದು ತಂದನು.

ನಾಗಭೂಷಣನು ಜಾರಿ ನೀರಿಗೆ ಬೀಳುವಾಗ ಬಲಗಾಲಿಗೆ ಪೆಟ್ಟಾಗಿ ಬೆಣಕಿಕೊಂಡಿತ್ತು. ಆದುದರಿಂದ ನಡೆಯಲಾಗದೆ ಸಂಕಟ ಪಡುತ್ತ ಕೃತಜ್ಞತೆಯಿಂದ ನೋಡುವ ನಾಗಭೂಷಣನನ್ನು ಸೋಮನಾಥನು ಹೆಗಲ ಮೇಲೆ ಹೊತ್ತುಕೊಂಡು ಹೋಗಿ ಅವನ ಮನೆಗೆ ಸೇರಿಸಿದನು.

ಮನೆಯೊಳಗೆ ಮಂಚದಲ್ಲಿ ಕದಲಲಾಗದೆ ಬಿದ್ದಿದ್ದ ನಾಗಭೂಷಣನಿಗೆ ಊರ ವೈದ್ಯರಿಂದ ಚಿಕಿತ್ಸೆ ಪ್ರಾರಂಭವಾಯಿತು. ಆ ಚಿಕಿತ್ಸೆಯಿಂದ ಕಾಲು ಗುಣವಾಗುವುದಕ್ಕೆ ಬದಲಾಗಿ, ಪೆಟ್ಟಾದ ಜಾಗದಲ್ಲಿ ಬಾಪು ಬಂದು, ಗಾಯದೊಳಗೆ ಕೀವು ತುಂಬಿ ಇನ್ನಷ್ಟು ಹೆಚ್ಚಿನ ನೋವಿನಿಂದ ನರಳ ತೊಡಗಿದನು. ಇಷ್ಟರಲ್ಲಿ ಅವನನ್ನು ನೋಡುವ ನೆವನದಲ್ಲಿ ದೂರದ ಬಂಧು ಬಳಗದವರೆಲ್ಲ ಬಂದು ಮನೆಯೊಳಗೆ ತುಂಬ ತೊಡಗಿದರು.

ನಾಗಭೂಷಣನಿಗೆ ಶರೀರ ಬಾಧೆಯೊಂದಿಗೆ ಮನೆಯೊಳಗೆ ಬಂದು ಸೇರಿ ತಿಂದು ಹಾಕುವ ಬಂಧುಗಣಗಳಿಂದ ಹೇಗೆ ಬಿಡಿಸಿಕೊಳ್ಳುವುದೋ ಎಂಬ ಚಿಂತೆಯೂ ಸೇರಿಕೊಂಡಿತು. ಆದರಿಂದ ನಿದ್ದೆ ಪೂರ್ತಿ ದೂರವಾಯಿತು,

ಆ ಸ್ಥಿತಿಯಲ್ಲಿ ಒಂದು ದಿನ ಅವನ ದೊಡ್ಡ ಸೊಸೆ ಗಂಡನೊಂದಿಗೆ, "ಈ ಮುದುಕರ ಕತೆ ಯಾವಾಗ ಮುಗಿಯುತ್ತೋ! ನನಗೆ ಈ ಮಂದೆಗಳಿಗೆಲ್ಲ ಬೇಯಿಸಿ ಹಾಕುವ ಕಷ್ಟ ಯಾವಾಗ ತೀರುತ್ತೋ!" ಎಂದು ಹೇಳಿದ ಶೂಲದಂತಹ ಮಾತು



ನಾಗಭೂಷಣನ ಕಿವಿಗೇ ಬಿತ್ತು. ಅದನ್ನು ಕೇಳಿ ನಾಗಭೂಷಣನ ತಲೆ ತಿರುಗಿತು. ತಾನು ಇಷ್ಟು ಕಷ್ಟಪಟ್ಟು ಸಂಪಾದಿಸಿಕೊಡುವುದು ತನ್ನ ಮಗನಿಗಾಗಿಯೇ; ಮೊಮ್ಮಕ್ಕಳಿಗಾಗಿಯೇ. ಹೆಂಡತಿಯ ಮಾತಿಗೆ ಅವಳ ಗಂಡ ಬಾಯಿಯೆತ್ತದೆ ಸುಮ್ಮನಿರುವುದನ್ನು ನೋಡಿ, ನಾಗಭೂಷಣನು ಇನ್ನಷ್ಟು ವ್ಯಥೆಗೊಂಡನು.

ಅದರ ಮರು ದಿನ ವಾಡಿಕೆಯ ಪ್ರಕಾರ ಸೋಮನಾಥನು ಅವನನ್ನು ನೋಡಲು ಬಂದನು. ನಾಗಭೂಷಣನು ಕಣ್ಣೀರು ತಂದುಕೊಂಡು, ರಾತ್ರಿ ತನ್ನ ಸೊಸೆ ಅವಳ ಗಂಡನ ಹತ್ತಿರ ಹೇಳಿದ ಮಾತುಗಳನ್ನು ಅವನೊಂದಿಗೆ ಹೇಳಿ, "ಸೋಮಾ! ನಾನು ಮಾಡಿದ ಪಾಪಗಳೇ ನನ್ನನ್ನು ಹಿಡಿದು ಹೀಗೆ ಪೀಡಿಸುತ್ತವೆ. ಬುದ್ಧಿ ತಿಳಿದಂದಿನಿಂದ ನಾನೊಂದು ಧರ್ಮಕಾರ್ಯ ಕೂಡಾ ಮಾಡಲಿಲ್ಲ. ಕಾಲವನ್ನೆಲ್ಲಾ ಕೆಟ್ಟ ಕೆಲಸದಿಂದ ಧನಾರ್ಜನೆ ಮಾಡುವುದರಲ್ಲೇ ಕಳೆದೆನು. ಈಗ ಅನುಭವಿಸುತ್ತಿದ್ದೇನೆ." ಎಂದನು.

ಸೋಮನಾಥನು ಅವನಿಗೆ ಸಮಾಧಾನ ಹೇಳುತ್ತ, "ಪಶ್ಚಾತ್ತಾಪ ಪಟ್ಟರೆ ಎಲ್ಲಾ ಪಾಪಗಳೂ ತೊಳೆದು ಹೋಗುತ್ತವೆಂದು ಹೇಳುತ್ತಾರೆ. ನಮ್ಮ ಕೇದಿಗೆ ಕೆರೆಯ ಗ್ರಹಣ ಸ್ನಾನವು ನಿಮ್ಮನ್ನು ಪುನೀತರನ್ನಾಗಿ ಮಾಡಿತು. ಈ ಊರಿನ ವೈದ್ಯರಿಂದ ಏನೂ ಉಪಯೋಗವಿಲ್ಲ. ನಗರಕ್ಕೆ ಹೋಗೋಣ, ಅಲ್ಲಿ ದೊಡ್ಡ ದೊಡ್ಡ ವೈದ್ಯನಿಪುಣರಿದ್ದಾರೆ. ನಿಮಗೆ ಖಂಡಿತಾ ಗುಣವಾಗುತ್ತದೆ" ಎಂದನು.

ಸೋಮನಾಥನು ನಾಗಭೂಷಣನನ್ನು ಗಾಡಿಯಲ್ಲಿ ಹಾಕಿಸಿ ನಗರದ ವೈದ್ಯರ ಬಳಿಗೆ ಕರೆದುಕೊಂಡು ಹೋದನು, ಅಲ್ಲಿ ಒಂದು ತಿಂಗಳಿದ್ದು ಚಿಕಿತ್ಸೆ ಮಾಡಿಸಿದ ಮೇಲೆ ಅವನ ಕಾಲು ಪೂರ್ತಿ ವಾಸಿಯಾಯಿತು. ಅವನು ಎಂದಿನಂತೆ ಆರೋಗ್ಯವಂತನಾಗಿ ಮನೆಗೆ ಹಿಂದಿರುಗಿದನು. ಇನ್ನೂ ಮನೆಯಲ್ಲಿ ತಳವೂರಿದ್ದ ಬಂಧುಗಳನ್ನು ಒಳ್ಳೆಯ ಮಾತಿನಿಂದ ಕಳುಹಿಸಿಬಿಟ್ಟನು. ಆ ಮೇಲೆ ಒಂದು ದಿನ ಬೆಳಗ್ಗೆ ಸೋಮನಾಥನನ್ನು ತನ್ನೊಂದಿಗೆ ಕರೆದುಕೊಂಡು ಹೊಲಗಳ ಕಡೆಗೆ ಹೋದನು.

ಅಲ್ಲಿ ನಾಗಭೂಷಣನು ತನ್ನದಾಗಿ ಮಾಡಿಕೊಂಡ ಸೋಮನಾಥನ ಗದ್ದೆಗಳನ್ನು ತೋರಿಸುತ್ತ, "ಸೋಮನಾಥಾ, ನಾನು ಗ್ರಹಣ ಸ್ನಾನದಿಂದ ಪುಣ್ಯಾತ್ಮನಾದೆನೆಂದು ಹೇಳಿರುವಿ. ಅದೇನೋ ನನಗೆ ತಿಳಿಯದು. ಆದರೆ ಇನ್ನು ಮೇಲೆ ನಾನು ಪಾಪಾತ್ಮನಾಗಿ ಬದುಕಿರಲಾರೆ. ಸಾಲದ ಲೆಕ್ಕದಲ್ಲಿ ಆಕ್ರಮಿಸಿಕೊಂಡ ನಿನ್ನ ಎರಡು ಎಕರೆ ಗದ್ದೆಗಳನ್ನು ನಿನಗೇ ಹಿಂದಿರುಗಿ ಕೊಡುತ್ತೇನೆ. ನಿನ್ನ ಸಾಲ ಇನ್ನೇನೂ ಉಳಿದಿಲ್ಲ" ಎಂದನು.



# ಗಟ್ಟಿಗ ಭಿಕ್ಷುಕ

**ರಂ**ಗಪುರಕ್ಕೆ ಹೊಸತಾಗಿ ಒಬ್ಬ ಭಿಕ್ಷುಕನು ಬಂದು ನಾಲ್ಕಾರು ಬೀದಿಗಳಲ್ಲಿ ತಿರುಗಿ ಯಾಚನೆ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದನು.

ಆದರೆ ಒಂದು ಮನೆಯ ಯಜಮಾನನು ಮಾತ್ರ ಭಿಕ್ಷುಕನು ಬಂದಾಗಲೆಲ್ಲಾ "ಅನ್ನವಿಲ್ಲಾ ಗಿನ್ನವಿಲ್ಲಾ, ಹೋಗಾಚೆ!" ಎಂದು ಛೀತ್ಕರಿಸುತ್ತಿದ್ದನು.

ಅದು ಪರಮಲೋಭಿಯಾದ ರಂಗಯ್ಯನ ಮನೆ. ಒಂದು ದಿನ ಭಿಕ್ಷುಕ ರಂಗಯ್ಯನ ಮನೆಗೆ ಹೋಗಿ, "ತಾಯಿ! ಅನ್ನಪೂರ್ಣೇಶ್ವರೀ!" ಎಂದು ಗಟ್ಟಿಯಾಗಿ ಕೂಗಿದನು.

ರಂಗಯ್ಯ ಕೋಪದಿಂದ ಉರಿದು, "ನಿನಗೆ ಎಷ್ಟು ಸಾರಿ ಹೇಳಲಿ? ಅನ್ನ ಇಲ್ಲಾ ಗಿನ್ನ ಇಲ್ಲಾ, ಹೋಗಾಚೆ" ಎಂದು ಬಾಗಿಲು ಮುಚ್ಚಲು ನೋಡಿದನು.

ಕೂಡಲೇ ಆ ಭಿಕ್ಷುಕ "ಕ್ಷಮಿಸಿ ಸ್ವಾಮಿ. ಈ ದಿನ ನಾನು ಅನ್ನ ಬೇಡಲು ಬರಲಿಲ್ಲ, ಸ್ವಾಮಿ" ಎಂದನು.

"ಮತ್ತೇಕೆ ಬಂದಿ?" ಎಂದು ಕೋಪದಿಂದ ಕೇಳಿದ ರಂಗಯ್ಯ.

"ನಾನು ಯಾವಾಗ ಬಂದರೂ ಅನ್ನ ಇಲ್ಲಾ ಅಂತಲೇ ಹೇಳ್ತೀರಿ. ಆದ್ದರಿಂದ ನಾನು ಅಲ್ಲಿ ಇಲ್ಲಿ ಬೇಡಿ ತಂದ ಅನ್ನದಲ್ಲಿ ಸ್ವಲ್ಪ ನಿಮಗೂ ಕೊಡೋಣಾ ಅಂತ ಕರೆದೆ. ಪಾತ್ರ ತನ್ನಿ ಸ್ವಾಮಿ!" ಎಂದು ಭಿಕ್ಷುಕನು ತನ್ನ ಜೋಳಿಗೆ ಬಿಚ್ಚಿದನು.

ರಂಗಯ್ಯನ ಮುಖ ಕಂದಿ ಕಪ್ಪಾಯಿತು.





# ಚಂದ್ರನಂಥವನು

ಒಂದು ಊರಿನಲ್ಲಿ ಸೋಮಶಾಸ್ತ್ರಿ ಎಂಬವನು ಸಕಲ ವಿದ್ಯೆಗಳನ್ನೂ ಕಲಿತು ತುಂಬಿದ ಕೊಡ ದಂತಾದನು. ಅವನು ಓದದ ಶಾಸ್ತ್ರಗಳಾಗಲಿ, ಕಲಿಯದ ಪಾಠಗಳಾಗಲೀ ಇರಲಿಲ್ಲ. ನಿಗರ್ವಿಯಾದ ಅವನು ತನಗೆ ತಿಳಿದುದನ್ನೆಲ್ಲಾ ಎಲ್ಲರಿಗೂ ಕಲಿಸ ಬೇಕೆಂಬ ಉದ್ದೇಶದಲ್ಲಿ ತಾನೇ ಒಂದು ಗುರುಕುಲ ವನ್ನು ಸ್ಥಾಪಿಸಿ ವಿದ್ಯಾರ್ಥಿಗಳನ್ನು ಕಳುಹಿಸಬೇಕೆಂದು ಎಲ್ಲರನ್ನೂ ಕೇಳಿಕೊಂಡನು.

ಸೋಮ ಶಾಸ್ತ್ರಿಯ ಪಾಂಡಿತ್ಯದ ಪ್ರಖ್ಯಾತಿ ಯನ್ನು ಕೇಳಿ ಅನೇಕಮಂದಿ ವಿದ್ಯಾರ್ಥಿಗಳು ಗುರು ಕುಲಕ್ಕೆ ಬರತೊಡಗಿದರು. ಅದನ್ನು ನೋಡಿ ಸೋಮಶಾಸ್ತ್ರಿಗೆ ತನ್ನ ಪಾಂಡಿತ್ಯವು ಸಾರ್ಥಕ ವಾಗುವುದೆಂದು ಸಂತೋಷವಾಯಿತು. ಕ್ರಮೇಣ ಏನಾಯಿತೆಂದರೆ, ಸೋಮಶಾಸ್ತ್ರಿ ಕಲಿಸುವ ವಿಷಯ ಗಳು ವಿದ್ಯಾರ್ಥಿಗಳಿಗೆ ಅರ್ಥವಾಗುವುದು ಕಷ್ಟ ವಾಯಿತು. ಅನೇಕರಿಗೆ ಅರ್ಥವೇ ಆಗದೆ ಕಲಿಯುವ ಉತ್ಸಾಹ ತಗ್ಗಿತು. ಅದಕ್ಕೆ ಅನುಸಾರವಾಗಿ ಶಿಷ್ಯರು ಹಿಂದಿರುಗಿ ಹೋಗತೊಡಗಿದರು. ಬಹು ಬೇಗದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ತೀರಾ ತಗ್ಗಿತು.

ಹೀಗಿರುವಾಗ ಸುಶಾಂತನೆಂಬ ನಡುವಯಸ್ಸಿ ನವನೊಬ್ಬ ಆ ಊರಿಗೆ ಬಂದನು. ಅವನಿಗೆ ತನ್ನವ ರೆನ್ನಲು ಯಾರೂ ಇರಲಿಲ್ಲ. ಅವನು ವಾಸಮಾಡಿ ಕೊಂಡಿದ್ದ ಊರಿನಲ್ಲಿ ಅವನ ಮನೆಯೂ ಆಸ್ತಿ ಪಾಸ್ತಿಗಳೂ ಹೆಂಡತಿಯೂ ಮಗನೂ ಅಗ್ನಿ ಅನಾಹುತಕ್ಕೆ ಆಹುತಿಯಾದರಂತೆ. ಆಮೇಲೆ ಅವನಿಗೆ ಆ ಊರಿನಲ್ಲಿರಲು ಇಷ್ಟವಿಲ್ಲದೆ ಈ ಊರಿಗೆ ಬಂದು, ಒಬ್ಬ ಧನಿಕನನ್ನು ನೋಡಿ ತನ್ನ ಸಂಗತಿಯನ್ನೆಲ್ಲಾ ಹೇಳಿಕೊಂಡನು.

ಅದನ್ನೆಲ್ಲಾ ಕೇಳಿ ಧನಿಕನು, "ನಿನಗೆ ನನ್ನ ಹತ್ತಿರ ಯಾವ ಕೆಲಸವೂ ಕಾಣುವುದಿಲ್ಲ. ಒಂದು ವಿಷಯ ಹೇಳುತ್ತೇನೆ. ಈ ಊರಿನಲ್ಲಿ ಸರಿಯಾದ ಗುರುಗಳಿಲ್ಲ. ಸೋಮಶಾಸ್ತ್ರಿಯು ಗುರುಕುಲವಿದ್ದರೂ ಆತನು ಸರಿಯಾದ ಗುರುವೆನಿಸಲಿಲ್ಲ. ನೀನು ಈ ಊರಿನ ಮಕ್ಕಳಿಗೆ ವಿದ್ಯೆ ಹೇಳಿಕೊಡುವಿಯಾದರೆ, ಇಲ್ಲಿ ನಿನಗೆ ಜೀವನೋಪಾಧಿ ಉಂಟಾಗುತ್ತದೆ". ಎಂದನು.

ಸುಶಾಂತನಿಗೆ ಅಷ್ಟೇನೂ ಓದುಬರಹ ಬಾರದು. ಆದರೆ ಅದನ್ನು ಅವನು ಧನಿಕನೊಡನೆ ಹೇಳದೆ,

“ಹಾಗಾದರೆ ಸರಿ. ಇನ್ನು ಹತ್ತು ದಿನಗಳಲ್ಲಿ ಒಳ್ಳೆಯ ಮುಹೂರ್ತವಿದೆ. ಆ ದಿನವೇ ನಾನು ಗುರುಕುಲವನ್ನು ಸ್ಥಾಪಿಸಿಬಿಡುತ್ತೇನೆ. ಅದಕ್ಕೆ ತಕ್ಕ ಸ್ಥಳವನ್ನು ಮಾತ್ರ ನೀವು ಕೊಡಿಸಬೇಕು” ಎಂದನು.

ಅದಕ್ಕೆ ಧನಿಕನು ಸಂತೋಷದಿಂದ ಒಪ್ಪಿಕೊಂಡನು. ಕೂಡಲೇ ಸುಶಾಂತನು ಸೋಮಶಾಸ್ತ್ರಿಯ ಬಳಿಗೆ ಹೋಗಿ, ನಮಸ್ಕಾರಮಾಡಿ, “ಅಲ್ಲ ಸ್ವಾಮಿ, ಈ ಊರಿನಲ್ಲಿ ತಮ್ಮಂತಹ ಗುರುಗಳಿರುವಾಗ, ಗುರುಗಳಿಗೆ ಕೊರತೆ ಬಂದಿದೆಯೇಕೆ ?” ಎಂದು ಕೇಳಿದನು.

“ಅದೇನೋ, ನನ್ನ ಸ್ಥಾಯಿ ತುಂಬ ಎತ್ತರದಲ್ಲಿರುವುದೇ ಕಾರಣವೆನ್ನಬೇಕು. ತಂದೆತಾಯಿಯರು ಸಂಪಾದಿಸಿದ ಆಸ್ತಿ ನನಗೆ ಬೇಕಾದಷ್ಟಿದೆ. ನನ್ನ ವಿದ್ಯೆಯನ್ನು ಹತ್ತು ಮಂದಿಗೆ ಕಲಿಸಬೇಕೆಂಬುದೇ ನನ್ನ ಆಶೆ. ನನಗೆ ಧನದ ಅಗತ್ಯವೇನಿಲ್ಲ. ಆದರೆ ಏಕೋ ನಾನು ಹೇಳುವ ಪಾಠಗಳು ವಿದ್ಯಾರ್ಥಿಗಳಿಗೆ ಅರ್ಥವಾಗದೆ ಹೋಗುತ್ತದೆ.” ಎಂದನು ಸೋಮಶಾಸ್ತ್ರಿ ಚಿಂತೆಯಿಂದ.

“ಅದಕ್ಕಾಗಿ ತಾವು ಚಿಂತಿಸಬೇಕಾಗಿಲ್ಲ. ಅದರ ಕಾರಣ ತಾವೇ ಹೇಳಿದಿರಲ್ಲ ? ನಿಮಗಿಂತ ಕಡಮೆ ಸ್ಥಾಯಿಯುವನಾದ ನನಗೆ ನೀವು ಸ್ವಲ್ಪ ವಿದ್ಯೆ ಹೇಳಿಕೊಡಿರಿ. ಅದನ್ನು ನಾನು ನನ್ನ ಶಿಷ್ಯರಿಗೆ ಬೋಧಿಸುತ್ತೇನೆ.” ಎಂದನು ಸುಶಾಂತ.

“ನನ್ನಿಂದಾಗದ ಕೆಲಸ ನಿನ್ನಿಂದ ಸಾಧ್ಯವಾಗಬಹುದೇನು ?” ಎಂದು ಸೋಮಶಾಸ್ತ್ರಿ ಸಂದೇಹದಿಂದ ಕೇಳಿದನು.

“ಅನುಮಾನಿಸಬೇಡಿ. ನೀವು ನನಗೆ ವಿದ್ಯೆ ಕಲಿಸದೆ ಹೋದರೆ, ನನ್ನ ಜೀವನ ನಡೆಯುವಂತಿಲ್ಲ. ದಯ ಮಾಡಬೇಕು” ಎಂದನು ಸುಶಾಂತ.

ಸೋಮಶಾಸ್ತ್ರಿ ಮತ್ತೇನೂ ಹೇಳದೆ ಸುಶಾಂತನಿಗೆ ವಿದ್ಯೆ ಕಲಿಸಲು ಒಪ್ಪಿಕೊಂಡನು. ಹತ್ತು ದಿನಗಳಲ್ಲೇ



ಸುಶಾಂತನು ಸೋಮಶಾಸ್ತ್ರಿಯಿಂದ ಸ್ವಲ್ಪ ವಿದ್ಯೆಗಳನ್ನು ಕಲಿತುಕೊಂಡು, ಮುಹೂರ್ತ ದಿನದಲ್ಲೇ ಗುರುಕುಲವನ್ನು ಪ್ರಾರಂಭಿಸಿದನು.

ಅವನು ಸೋಮಶಾಸ್ತ್ರಿ ಹೇಳುವ ಪ್ರತಿ ವಿಷಯವನ್ನೂ ಚೆನ್ನಾಗಿ ಮನನ ಮಾಡಿಕೊಂಡು, ಅದನ್ನೇ ಒಳ್ಳೆಯ ರೂಪಕ್ಕೆ ತಂದು ಚಿಕ್ಕ ಮಕ್ಕಳಿಗೆ ಅರ್ಥವಾಗುವ ಹಾಗೆ ಸುರಸವಾಗಿ ಪಾಠ ಹೇಳುತ್ತಿದ್ದನು. ಸುಶಾಂತನ ಬೋಧನಾಪದ್ಧತಿ ಹುಡುಗರಿಗೆ ಚೆನ್ನಾಗಿ ಅರ್ಥವಾಗುತ್ತ ಉತ್ಸಾಹದಿಂದ ಕಲಿಯತೊಡಗಿದರು.

ಪ್ರತಿದಿನವೂ ಸುಶಾಂತನು ಸೋಮಶಾಸ್ತ್ರಿಯ ಬಳಿಗೆ ಹೋಗಿ ವಿದ್ಯೆ ಕಲಿಯುತ್ತಲೇ ಇದ್ದನು. ತಾನು ತಿಳಿದುಕೊಂಡ ವಿಷಯಗಳನ್ನು ಕಲ್ಪನಾಶಕ್ತಿಯಿಂದ ಕಥೆಗಳಾಗುವಂತೆ ಮಾರ್ಪಡಿಸಿ ಮಕ್ಕಳಿಗೆ ಹೇಳತೊಡಗಿದನು. ಕ್ರಮವಾಗಿ ಸುಶಾಂತನ ಗುರುಕುಲದಲ್ಲಿ ಶಿಷ್ಯರು ಹೆಚ್ಚಾದರು. ಅಷ್ಟು ಮಂದಿಗೂ

ತಾನೊಬ್ಬನೇ ವಿದ್ಯೆ ಕಲಿಸಲು ಸಾಧ್ಯವಾಗದೆ, ತನ್ನ ಕಥೆಗಳನ್ನೆಲ್ಲಾ ಪುಸ್ತಕವಾಗಿ ಬರೆದು, ಅದರಲ್ಲಿಯ ವಿವರಗಳನ್ನು ಬೋಧಿಸಲು ಬೇರೆ ಕೆಲವರಿಗೆ ಶಿಕ್ಷಣ ಕೊಟ್ಟನು. ಕ್ರಮೇಣ ಅಂಥವರೂ ಗುರುಗಳಾಗುತ್ತ ಸುಶಾಂತನ ಗುರುಕುಲವು ಒಂದು ವಿಶ್ವವಿದ್ಯಾಲಯ ವಾಗಿ ಮಾರ್ಪಟ್ಟಿತು.

ಸುಶಾಂತನ ಪ್ರತಿಭೆ ಕುರಿತು, ಆ ದೇಶವನ್ನಾಳುವ ರಾಜನಿಗೂ ತಿಳಿಯಿತು. ಅವನು ಸುಶಾಂತನನ್ನು ಕರೆಯಿಸಿ, ಸ್ವಲ್ಪ ಕಾಲದ ವರೆಗೆ ರಾಜಧಾನಿಯ ಲ್ಲಿದ್ದು, ರಾಜಕುಮಾರರಿಗೆ ವಿದ್ಯೆ ಕಲಿಸಬೇಕೆಂದು ಕೇಳಿಕೊಂಡನು.

ಸುಶಾಂತನು ರಾಜನೊಂದಿಗೆ ವಿನಯದಿಂದ, "ಮಹಾಪ್ರಭು ! ಇದರಲ್ಲಿ ನನ್ನ ದೊಡ್ಡತನವು ಏನೂ ಇಲ್ಲ. ನಾನು ಸೋಮಶಾಸ್ತ್ರಿ ಎಂಬ ಮಹಾ ವಿದ್ವಾಂಸರ ಬಳಿಯಲ್ಲಿ ದಿನಾ ಅವರ ಸೇವೆ ಮಾಡಿ ಸ್ವಲ್ಪವಾಗಿ ವಿದ್ಯೆ ಕಲಿತುಕೊಂಡು, ಹಾಗೆ ಕಲಿತುದನ್ನು ಚಿಕ್ಕವರಿಗಾಗುವ ಹಾಗೆ ಮಾರ್ಪಡಿಸಿ ಬರೆಯುತ್ತೇನೆ. ನಾನು ಕಲಿತುಕೊಳ್ಳಬೇಕಾದುದು ಎಷ್ಟೋ ಇದೆ. ತಾವು ದಯಮಾಡಿ, ರಾಜಕುಮಾರ ರನ್ನು ವಿದ್ಯಾಲಯಕ್ಕೆ ಕಳುಹಿಸಿದರೆ, ಎಲ್ಲರಿಗೂ ಎಷ್ಟೋ ಉಪಕಾರ ಮಾಡಿದವರಾಗುವಿರಿ." ಎಂದು ಹೇಳಿದನು.

ರಾಜನು ಆಶ್ಚರ್ಯಪಡುತ್ತ, "ನಿನಗಿಂತಲೂ ಆ ಸೋಮಶಾಸ್ತ್ರಿ ದೊಡ್ಡವನೇನು ? ಅದೇ ನಿಜ ವಾದರೆ ಆ ಸೋಮಶಾಸ್ತ್ರಿಯೇ ವಿದ್ಯಾಲಯವನ್ನು ನಡೆಸಬಹುದಲ್ಲಾ ? " ಎಂದನು.

"ಪ್ರಭೂ ! ನಿಮಗೆ ತಿಳಿಯದುದೇನಿದೆ ? ಈ ಸೃಷ್ಟಿಗೆಲ್ಲಾ ಶಕ್ತಿಯನ್ನು ಕೊಡುವ ಸೂರ್ಯನನ್ನು ನಾವು ಕಣ್ಣುಬಿಡಿಸಿ ನೋಡಬಲ್ಲೆವೇ ? ನಮ್ಮಿಂದ ನೋಡಲಾಗದ ಮಾತ್ರಕ್ಕೆ ಸೂರ್ಯನ ಶಕ್ತಿ ಸುಳ್ಳಾಗುವುದುಂಟೆ ? ಸೋಮಶಾಸ್ತ್ರಿ ಸೂರ್ಯ ಭಗವಾನ್ ಇದ್ದಹಾಗೆ ! ನನ್ನಂಥವರಿಗೆ ಅವರಿಂದಲೇ ಲಭಿಸುವ ಶಕ್ತಿ, ಅಷ್ಟೇ " ಎಂದನು ಸುಶಾಂತ.

ರಾಜನು ಕೂಡಲೇ, "ಆ ಸೋಮಶಾಸ್ತ್ರಿ ಸೂರ್ಯಭಗವಾನನಾದರೆ, ಕಣ್ಣೆತ್ತಿ ನೋಡಲು ಅಶಕ್ಯವಾದ ಆ ತೇಜಸ್ಸನ್ನು ಬೆಳುದಿಂಗಳಾಗಿ ಮಾರ್ಪಡಿಸಿ ಮಾನವರ ಮೇಲೆ ವರ್ಷಿಸುವ ಚಂದ್ರನಂಥವನು ನೀನು ! ಚಂದಮಾಮನು ನೀನು !" ಎಂದು ಹೇಳಿ ತನ್ನ ಕುಮಾರರನ್ನು ಅವನೊಂದಿಗೆ ವಿದ್ಯಾಲಯಕ್ಕೆ ಕಳುಹಿಸಿಕೊಟ್ಟನು.

ಆ ದಿನದಿಂದ ಸುಶಾಂತನಿಗೆ ಚಂದಮಾಮನೆಂಬ ಹೆಸರು ಬಂತು. ಊರ ಪ್ರಮುಖರು "ಸುಶಾಂತ ಚಂದಮಾಮೋಪಾಧ್ಯಾಯರೇ " ಎಂದು ಅವನನ್ನು ಸಂಬೋಧಿಸುತ್ತಿದ್ದರು.





# ಬೆಲೆ ಅರಿಯದವನು

ಪೂರ್ವ ಕಾಲದಲ್ಲಿ ಮಗಧರಾಜ್ಯವನ್ನು ವಿರೂಪ ಸೇನನೆಂಬ ರಾಜನು ಆಳಿಕೊಂಡಿದ್ದನು. ಆಗ ಬೋಧಿಸತ್ವನು ಒಂದು ಆನೆಯಾಗಿ ಅವತಾರ ವೆತ್ತಿದ್ದನು. ಆ ಆನೆ ಬಿಳಿಯ ಶರೀರ ಛಾಯೆಯಿಂದ ಐರಾವತದ ಹಾಗೆ ಕಾಣುತಿತ್ತು. ಆದುದರಿಂದ ಮಗಧರಾಜನು ಆ ಗಂಭೀರವಾದ ಆನೆಯನ್ನು ಕೊಂಡುಕೊಂಡು ತನ್ನ ಪಟ್ಟದ ಆನೆಯಾಗಿ ಮಾಡಿಕೊಂಡನು.

ಹೀಗಿರುವಾಗ ಯಾವುದೋ ಒಂದು ಪರ್ವದಿನವು ಬಂದಿತು. ಆದಿನ ಮಗಧರಾಜ್ಯವು ದೇವಲೋಕದ ಹಾಗೆ ಅಲಂಕರಿಸಲ್ಪಟ್ಟಿತು. ನಗರದ ಮುಖ್ಯ ಮುಖ್ಯ ಬೀದಿಗಳಲ್ಲಿ ಭಾರಿಯಾದ ಮೆರವಣಿಗೆಗೆ ಏರ್ಪಾಟು ನಡೆಯಿತು. ಅದಕ್ಕಾಗಿ ರಾಜನ ಪಟ್ಟದಾನೆಯನ್ನು ಚೆನ್ನಾಗಿ ಅಲಂಕಾರ ಮಾಡಿದರು. ಸೈನಿಕರು ತೂಕದ ನಡಿಗೆಯಿಂದ ಪಟ್ಟದಾನೆಯ ಮುಂದೆಯೂ ಹಿಂದೆಯೂ ನಡೆಯುತ್ತಿರಲು, ರಾಜನು ಪಟ್ಟದಾನೆಯ ಅಂಬಾರಿಯಲ್ಲಿ ಆಸೀನ ನಾಗಿ ಮೆರವಣಿಗೆಯಲ್ಲಿ ಹೊರಟನು. ದಾರಿಯಲ್ಲಿ ಉದ್ದಕ್ಕೂ ಎರಡು ಬದಿಯಲ್ಲಿಯೂ, ಮನೆ ಮಂದಿರಗಳ ಮೇಲೆಯೂ ಜನರು ನೋಡು ತ್ತಿದ್ದರು. ಎಲ್ಲರ ಕಣ್ಣೂ ಪಟ್ಟದಾನೆಯ ಮೇಲೆಯೇ.

"ಆಹಾ ! ಏನು ಚಂದ ಈ ಆನೆ ! ಎಂಥ ಗಮನ ಈ ಗಜರಾಜನದು ! ಇದರ ಅಂದಚಂದಗಳನ್ನು ನೋಡುತ್ತಾ ಇದ್ದರೆ, ಇದು ಯಾವ ಸಾರ್ವಭೌಮ ನಿಗೋ ವಾಹನವಾಗಿರಬೇಕೆಂದೇ ಕಾಣುತ್ತದೆ !" ಎಂದು ಬಾಯಿಬಿಟ್ಟು ಮೆಚ್ಚುಗೆ ಪ್ರಕಟಿಸಿದರು.

ಆ ಹೊಗಳಿಕೆಯ ಮಾತುಗಳು ರಾಜನ ಕಿವಿಗೂ ಬಿದ್ದುವು. ಆಗ ಅವನ ಮನಸ್ಸಿನೊಳಗೆ, "ನಾನು ಸಾರ್ವಭೌಮನಲ್ಲವಂತೆ ! ಜನರು ರಾಜನಾದ ನನಗೆ ಯಾವ ಗೌರವವನ್ನೂ ತೋರಿಸದೆ ಈ ಆನೆಗೆ ತೋರಿಸುತ್ತಿದ್ದಾರೆ ! ಒಬ್ಬನಾದರೂ ಅಂಬಾರಿಯಲ್ಲಿ ಲ್ಲಿರುವ ನನ್ನನ್ನು ಲಕ್ಷಿಸುವುದಿಲ್ಲ. ಎಲ್ಲರ ದೃಷ್ಟಿ ಯನ್ನೂ ಈ ಆನೆಯೇ ಎಳೆದುಕೊಳ್ಳುತ್ತಿದೆ. ಇದನ್ನು ಯಾವುದೋ ಒಂದು ವಿಧದಲ್ಲಿ ಪರಲೋಕಕ್ಕೆ ಕಳುಹಿಸಲೇಬೇಕು !" ಎಂದುಕೊಂಡನು. ಅವನು ಮಾವಟಿಗನನ್ನು ಕರೆಯಿಸಿ, "ಏನೋ, ನಮ್ಮ ಪಟ್ಟದಾನೆ ಒಳ್ಳೆಯ ಶಿಕ್ಷಣ ಪಡೆದಿದೆಯೆ ?" ಎಂದು ಕೇಳಿದನು.

"ಬೇಕಾದ ಶಿಕ್ಷಣವೆಲ್ಲಾ ಕೊಟ್ಟಿದ್ದೇನೆ ಪ್ರಭು. ಅದರ ಯೋಗ್ಯತೆಗೆ ತಕ್ಕ ಹಾಗೆ ಎಲ್ಲಾ ಶಿಕ್ಷಣ ವನ್ನೂ ಪಡಿದಿದೆಯೆಂತಲೇ ಪಟ್ಟದಾನೆಯ ಪದವಿ ಯಲ್ಲಿದೆಯಷ್ಟೆ? ತಮಗೇನಾದರೂ ಸಂದೇಹ ವಿದೆಯೆ?" ಎಂದನು ಮಾವಟಿಗ.

"ಸಂದೇಹವಿರುವುದರಿಂದಲೇ ಕೇಳುತ್ತೇನೆ. ನನಗೇನೋ ಅದು ಗರ್ವಿಷ್ಠವಾಗಿರುವಂತೆ ಕಾಣುತ್ತೆ. ಗರ್ವಕ್ಕೆ ತಕ್ಕ ಸಾಮರ್ಥ್ಯವಿದೆಯೋ ನೋಡ ಬೇಕೆನಿಸುತ್ತದೆ. ನೀನು ಶಿಕ್ಷಣ ಕೊಟ್ಟು ನಂಬುವ ಹಾಗೆ ಅದರ ಸಾಮರ್ಥ್ಯ ತೋರಿಸಲಿ. ಅಕೋ, ಅಲ್ಲಿ ಕಾಣುವ ಪರ್ವತ ಶಿಖರದ ಮೇಲೆ ಅದನ್ನು ಏರಿಸು ನೋಡೋಣ" ಎಂದನು.

"ಅದನ್ನು ಈ ಆನೆ ಸುಲಭವಾಗಿಯೇ ಏರುತ್ತದೆ ಪ್ರಭೂ" ಎಂದು ಹೇಳಿ ಮಾವಟಿಗನು ಆ ಆನೆಯನ್ನು ಬಲುಬೇಗನೇ ಆ ಪರ್ವತ ಶಿಖರದ ಮೇಲೇರಿಸಿದನು.

ರಾಜನು ಕೆಲವು ಮಂದಿ ತನ್ನ ಪರಿವಾರದವ ರನ್ನು ಕರೆದುಕೊಂಡು ಆ ಪರ್ವತ ಶಿಖರದ ಮೇಲೆ ಏರಿದನು. ಆ ಶಿಖರದ ಒಂದು ಬದಿಯಲ್ಲಿ ಚಪ್ಪಟೆ ಸಮತಲದ ಚಿಕ್ಕ ಪ್ರದೇಶವಿದ್ದು ಅದರಾಚೆಗೆ ಅತ್ಯಗಾಧವಾದ ಪಾತಳಿ ಇದ್ದಿತು. ರಾಜನು ಆನೆಯನ್ನು ಆ ಸಮತಲದ ಮೇಲೆ ನಿಲ್ಲಿಸುವಂತೆ ಮಾವಟಿಗನಿಗೆ ಹೇಳಿದನು.

"ನೀನು ಅದಕ್ಕೆ ಕೊಟ್ಟ ಶಿಕ್ಷಣದ ಪ್ರಭಾವ ವನ್ನು ನೋಡುತ್ತೇನೆ. ಎಲ್ಲಿ, ಆನೆಯನ್ನು ಮೂರು ಕಾಲುಗಳಲ್ಲಿ ನಿಲ್ಲಿಸು" ಎಂದನು ರಾಜ.

ಕೂಡಲೇ ಮಾವಟಿಗನು ಅಂಕುಶ ಭಾಷೆಯಲ್ಲಿ ಆನೆಗೆ ಸೂಚನೆಕೊಟ್ಟು, "ಬಾಬೂ! ಪ್ರಭುಗಳ ಆಜ್ಞೆ. ಮೂರು ಕಾಲುಗಳಲ್ಲಿ ನಿಲ್ಲು" ಎಂದನು.

ಆನೆ ಹಾಗೆಯೇ ನಿಂತಿತು. ಅದನ್ನು ನೋಡಿ ರಾಜನು "ಚೆನ್ನಾಗಿದೆ! ಈಸಾರಿ ಮುಂದಿನ ಎರಡು ಕಾಲುಗಳಲ್ಲಿ ಹೇಗೆ ನಿಲ್ಲುವುದೋ ನೋಡುತ್ತೇನೆ" ಎಂದನು.

ಮಾವಟಿಗನ ಸನ್ನೆಯಂತೆ ಆನೆ ಹಿಂದಿನ ಕಾಲುಗಳನ್ನೆತ್ತಿ ಮುಂದಿನ ಕಾಲುಗಳಲ್ಲಿ ನಿಂತಿತು.



" ಇದೇನೋ ಸರಿ. ಹಿಂದಿನ ಕಾಲುಗಳ ಮೇಲೆ ನಿಲ್ಲಲಿಕ್ಕೆ ಹೇಳು." ಎಂದನು ರಾಜ. ಕೂಡಲೇ ಆನೆ ಹಿಂದಿನ ಕಾಲುಗಳ ಮೇಲೆ ಜಮ್ಮನೆ ನಿಂತಿತು.

" ಒಂಟಿಕಾಲಿನಲ್ಲಿ ನಿಲ್ಲಿಸು ! " ಎಂದು ರಾಜನು ಆಜ್ಞೆ ಮಾಡಿದನು. ಮಾವಟಿಗನ ಸೂಚನೆಯಂತೆ ಆನೆ ಒಂದೇ ಕಾಲಿನಲ್ಲಿ ನಿಂತು ತೋರಿಸಿತು.

ಆನೆಯಿಂದ ಇಷ್ಟೆಲ್ಲಾ ಮಾಡಿಸುವಾಗಲೂ ಅದು ಸ್ವಲ್ಪ ಮಾತ್ರ ತೂಕ ತಪ್ಪಿದ್ದರೆ ಪಾತಳಿಗೆ ಬೀಳಬೇಕಿತ್ತು. ಹಾಗೇನೂ ಆಗದೆ ಅದು ಕ್ಷೇಮವಾಗಿರುವುದನ್ನು ನೋಡಿ ರಾಜನು ಮನಸ್ಸಿನಲ್ಲಿ ಕೊಳೆಯುತ್ತ, ಮಾವಟಿಗನೊಂದಿಗೆ, " ಇಂತಹ ಕೆಲಸಗಳನ್ನು ಸ್ವಲ್ಪಮಟ್ಟಿಗೆ ಶಿಕ್ಷಣ ಕೊಟ್ಟ ಮಾತ್ರಕ್ಕೆ ಎಂತಹ ಆನೆಯಾದರೂ ಮಾಡಿಬಿಡುತ್ತದೆ. ಇದರ ಮಹತ್ವಕ್ಕೆ ತಕ್ಕಹಾಗೆ ಇನ್ನೊಂದು ಪರೀಕ್ಷೆ ಹೇಳುತ್ತೇನೆ " ಎಂದನು.

" ಅದೇನು ಪರೀಕ್ಷೆಯೋ ಅಪ್ಪಣೆಯಾಗಲಿ ಪ್ರಭೂ " ಎಂದ ಮಾವಟಿಗ.

" ಆನೆ ತನ್ನ ಕಾಲುಗಳ ಆಧಾರದಿಂದ ಬೆಟ್ಟದ ಮೇಲೆ ನಡೆದ ಹಾಗೆಯೇ ಆಕಾಶದ ಗಾಳಿಯಲ್ಲಿಯೂ ನಡೆಯಬೇಕು. ಇದು ನನ್ನ ಆಜ್ಞೆ ! ನಡೆಯಲಿ ! " ಎಂದನು ಆ ಕುತ್ಸಿತ ಬುದ್ಧಿಯ ರಾಜ.

ರಾಜನ ಆಜ್ಞೆ ಕೇಳಿದಕೂಡಲೇ ಮಾವಟಿಗನಿಗೆ ರಾಜನ ದುರುದ್ದೇಶವು ಅರ್ಥವಾಯಿತು. ಆದರೆ ಅವನು ಸ್ವಲ್ಪವೂ ಹೆದರದೆ ಶಂಕಿಸದೆ ಆನೆಯ ಕಿವಿಯಲ್ಲಿ ರಹಸ್ಯವಾಗಿ ಹೀಗೆಂದನು : " ಬಾಬೂ ! ನೀನು ಈ ಪರ್ವತ ಶಿಖರದಿಂದ ಅಗಾಧಕ್ಕೆ ಬಿದ್ದು ಸಾಯಬೇಕೆಂದು ರಾಜನು ಹೀಗೆಲ್ಲಾ ಮಾಡಿಸುತ್ತಾನೆ. ಅವನು ನಿನ್ನ ಬೆಲೆಯನ್ನರಿಯದವನು. ನಿನ್ನಂಥವನು ಈ ಅಲ್ಪನಿಗೆ ಪಟ್ಟದಾನೆಯಾಗಿರಲೇಬಾರದು. ನಿನಗೆ ವಿಶೇಷ ಶಕ್ತಿಯಿದೆಯೆಂದು ನನಗೆ ಗೊತ್ತು. ಈ ಶಿಖರದ ಅಂಚಿನಿಂದ ಮುಂದಡಿಯಿಟ್ಟು ಗಾಳಿಯಲ್ಲಿ ನಡೆಯಬಲ್ಲೆಯಾ ? " ಎಂದನು.

ಆನೆ ತಲೆಯೊಲಿದು ಮಾವಟಿಗನನ್ನು ಏರಿಸಿಕೊಂಡು ಶಿಖರದ ಮೇಲಿನಿಂದ ಮುಂದೆ ಹೋಗಿ,



ಹಾಗೆಯೇ ಆಕಾಶಕ್ಕೆ ಕಾಲಿಟ್ಟು ಗಾಳಿಯಲ್ಲಿ ನಡೆಯುತ್ತಾ ಮುಂದೆ ಮುಂದೆ ಹೋಯಿತು. ಆಗ ಮಾವಟಿಗನು ರಾಜನಿಗೆ ಕೇಳುವಂತೆ ಗಟ್ಟಿಯಾಗಿ, "ರಾಜಾ ! ಈ ಆನೆ ಸಾಮಾನ್ಯವಾದುದಲ್ಲ. ದೈವಾಂಶದಿಂದ ಜನಿಸಿದ್ದು. ಇದರ ಬೆಲೆ ಅರಿಯದ ನಿನ್ನಂಥ ಹೀನರಾಜನಿಗೆ ಪಟ್ಟದಾನೆಯಾಗಿರಲು ಇದು ತಕ್ಕುದಲ್ಲ. ಬೆಲೆ ಅರಿಯದ ಮೂರ್ಖರು ಇಂತಹ ಆನೆಗಳನ್ನು ಮಾತ್ರವಲ್ಲ, ಅಮೂಲ್ಯವಾದ ಏನನ್ನಾದರೂ ಕಳೆದುಕೊಂಡು ಬಿಡುತ್ತಾರೆ. ಅಂತಹ ಮೂರ್ಖನು ತನ್ನ ಅವಿವೇಕವನ್ನು ತಾನಾಗಿ ಹತ್ತು ಮಂದಿಗೆ ಹೇಳಲಾರನು. ಇದು ಅವನಿಗೆ ನಾಚಿಕೆಯ ಬದುಕು" ಎಂದನು.

ಆನೆ ಗಾಳಿಯಲ್ಲಿ ನಡೆಯುತ್ತಾ ಸಾಗಿ ಕಾಶೀ ರಾಜ್ಯವನ್ನು ತಲಪಿ, ಅಲ್ಲಿಯ ರಾಜನ ಉದ್ಯಾನ ವನದ ಮೇಲುಭಾಗದ ಆಗಸದಲ್ಲಿ ನಿಂತಿತು. ಇದನ್ನು ನೋಡಿದ ನಗರದ ಪೌರರು ಕೋಲಾಹಲ ಮಾಡುತ್ತಾ ಅಲ್ಲಿ ಸೇರಿದರು.

"ಆಕಾಶದಲ್ಲೊಂದು ಬಿಳೀಯಾನೆ ಬಂದು ನಿಂತಿದೆ" ಎಂಬ ಅದ್ಭುತ ವಾರ್ತೆ ರಾಜನ ವರೆಗೆ ತಲಪಿತು. ಕಾಶೀರಾಜನು ಉದ್ಯಾನದ ಕಡೆಗೆ ಬೇಗ ಬೇಗನೇ ಬಂದು ಆನೆಯ ಕಡೆಗೆ ನೋಡಿ ಕೈ ಜೋಡಿಸಿ, "ಹೇ ! ಗಜರಾಜಾ ! ನಿನ್ನ ಬರುವಿಕೆಯಿಂದ ನನ್ನ ರಾಜ್ಯವು ಪವಿತ್ರವಾಯಿತು. ದಯದೋರಿ, ಕೆಳಗಿಳಿದು ಬರಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಬೇಡಿಕೊಂಡನು.

ರಾಜನ ಪ್ರಾರ್ಥನೆಯನ್ನು ಕೇಳಿ ಆನೆಯ ರೂಪದಲ್ಲಿರುವ ಬೋಧಿಸತ್ವನು ಕೆಳಗಿಳಿದು ಗಂಭೀರವಾಗಿ ನಿಂತನು. ರಾಜನು ಪ್ರಶ್ನಿಸಿದ ಮೇಲೆ ಮಾವಟಿಗನು ನಡೆದ ಎಲ್ಲಾ ಸಂಗತಿಯನ್ನೂ ಕಾಶೀರಾಜನೊಂದಿಗೆ ಹೇಳಿದನು. ಅದನ್ನು ಕೇಳಿ ಕಾಶೀರಾಜನಿಗೂ, ಅಲ್ಲಿ ಸೇರಿದ ಜನರಿಗೂ ತುಂಬಾ ಆನಂದವಾಯಿತು. ರಾಜನು ಆನೆಯನ್ನು ಭವ್ಯವಾಗಿ ಅಲಂಕರಿಸಿ, ಅದಕ್ಕಾಗಿ ದಿವ್ಯ ಸುಂದರವಾದೊಂದು ಗಜಶಾಲೆಯ ಮಂದಿರವನ್ನು ಏರ್ಪಡಿಸಿದನು. ಆಮೇಲೆ ತನ್ನ ರಾಜ್ಯವನ್ನು ಮೂರು ಭಾಗಗಳಾಗಿ ಮಾಡಿ, ಒಂದು ಭಾಗವನ್ನು ಆನೆಯ ರೂಪದಲ್ಲಿರುವ ಬೋಧಿಸತ್ವನ ಪೋಷಣೆಗೂ, ಎರಡನೇ ಭಾಗವನ್ನು ಅದರ ಮಾವಟಿಗನಿಗೂ ಕೊಟ್ಟನು. ಉಳಿದ ಮೂರನೇ ಭಾಗವನ್ನು ಮಾತ್ರ ತನ್ನ ಉಪಯೋಗಕ್ಕೆ ಇಟ್ಟುಕೊಂಡನು.

ಬೋಧಿಸತ್ವನು ಕಾಶೀರಾಜ್ಯವನ್ನು ಸೇರಿದ ಮೇಲೆ ಕಾಶೀರಾಜನ ಐಶ್ವರ್ಯವು ದಿನದಿಂದ ದಿನಕ್ಕೆ ಅಭಿವೃದ್ಧಿಯಾಗುತ್ತಾ ಹೋಯಿತು. ಅವನ ಹೆಸರು ಪ್ರಖ್ಯಾತವಾಗಿ ದಶದಿಶೆಗಳಲ್ಲಿಯೂ ವ್ಯಾಪಿಸಿತು.






# ಗುಣಾಢ್ಯ

ಹಿಂದಿನ ಕಾಲದಲ್ಲಿ ಪ್ರತಿಷ್ಠಾನವೆಂಬ ನಗರವು ಸಾತವಾಹನ ರಾಜರಿಗೆ ರಾಜಧಾನಿಯಾಗಿತ್ತು. ರಾಜಾಸ್ಥಾನದ ಪಂಡಿತರಲ್ಲಿ ಗುಣಾಢ್ಯ ಮತ್ತು ಶರ್ವವರ್ಮ ಎಂಬವರಿದ್ದರು. ಒಂದ ಸಾರಿ ಮಾತಿನ ಸಂದರ್ಭದಲ್ಲಿ ಶರ್ವವರ್ಮನು ಆರು ತಿಂಗಳಿನಲ್ಲಿ ರಾಜನಿಗೆ ಸಂಸ್ಕೃತ ಕಲಿಸುವೆನೆಂದು ಹೇಳಿದನು.

ಈ ವಿಷಯವಾಗಿ ಪಂಡಿತರಿಬ್ಬರೂ ವಾದಕ್ಕೆ ಬಿದ್ದು ಪಂಥ ಕಟ್ಟಿಕೊಂಡರು. 'ರಾಜನಿಗೆ ಆರು ತಿಂಗಳಲ್ಲೇ ನೀನು ಸಂಸ್ಕೃತ ಕಲಿಸಿದರೆ ನಾನು ಸಂಸ್ಕೃತ ರಚನೆಯನ್ನೇ ಬಿಟ್ಟು ಬಿಡುತ್ತೇನೆ' ಎಂದನು ಗುಣಾಢ್ಯ. ಆದರೆ ರಾಜನು ಮನಸ್ಸು ಗೊಟ್ಟು ಓದಿ ಬೇಗನೇ ಸಂಸ್ಕೃತ ಕಲಿತುದರಿಂದ ಗುಣಾಢ್ಯನು ಸೋತನು.







ಗುಣಾಢ್ಯನು ನಗರವನ್ನು ಬಿಟ್ಟು ದೇಶಾಟನೆಗೆ ಪ್ರಾರಂಭಿಸಿದನು. ಅವನು ಕನ್ಯಾಕುಮಾರಿಯಿಂದ ಹಿಮಾಲಯದವರೆಗೂ ಪರ್ಯಟಿಸಿ ಪಂಡಿತ ಪಾಮರರಿಂದ ಅನೇಕ ಕಥೆಗಳನ್ನು ಶೇಖರಿಸಿ ಕೊಂಡನು. ಆ ಮೇಲೆ ಅವುಗಳನ್ನೆಲ್ಲಾ ಪೈಶಾಚಿಕ ಭಾಷೆಯಲ್ಲಿ ಬರೆದನು.




ಅನೇಕ ವರ್ಷಗಳ ಮೇಲೆ ಗುಣಾಢ್ಯನು ಪ್ರತಿಷ್ಠಾನ ನಗರಕ್ಕೆ ಹಿಂದಿರುಗಿ ಬಂದನು. ಪಂಡಿತರೂ ಮಿತ್ರರೂ ಅವನನ್ನು ಗೌರವದಿಂದ ಸ್ವಾಗತಿಸಿದರು. ಅವನೊಂದಿಗಿದ್ದ 'ಬೃಹತ್ಕಥೆ' ಎಂಬ ಉದ್ಗ್ರಂಥವು, ಎಷ್ಟು ಬರೆದರೂ ಮುಗಿಯದಂತಹ, ಪ್ರಪಂಚದಲ್ಲೇ ಮೊತ್ತ ಮೊದಲನೇ ಕಥಾ ಸಂಕಲನವೆನಿಸಿತ್ತು.

ಗುಣಾಢ್ಯನು ತನ್ನ ಬೃಹತ್ಕಥೆಯನ್ನು ರಾಜನ ಮುಂದೆ ಓದ ತೊಡಗಿದನು. ಆದರೆ ರಾಜನು ಅದರ ಮೇಲೆ ಲಕ್ಷ್ಯಗೊಡದೆ ಮಂತ್ರಿಗಳೊಂದಿಗೆ ಏನೋ ಮಾತಾಡಿಕೊಂಡಿದ್ದನು. ಗುಣಾಢ್ಯನಿಗೆ ರಾಜನ ಪ್ರವರ್ತನೆ ಅವಮಾನಕರವೆನಿಸಿತು.







ಅವನು ತನ್ನ ತಾಲಪತ್ರ ಗ್ರಂಥವನ್ನು ಸುತ್ತಿಕಟ್ಟಿಕೊಂಡು ಸಭೆಯಿಂದ ಹೊರಟು ಹೋದನು. ರಾಜನು ಅದನ್ನು ಸಹಾ ಲಕ್ಷಿಸಲಿಲ್ಲ. ಸಭಾಸದರು ಕೂಡ ಗುಣಾಢ್ಯನನ್ನು ತಡೆಯಲು ಪ್ರಯತ್ನಿಸದೆ ಸುಮ್ಮನಿದ್ದರು.




ಗುಣಾಢ್ಯನಿಗೆ ಅತೀವ ವೇದನೆಯಾಯಿತು. ಅವನು ನಗರದ ಸಮೀಪದ ಒಂದು ಗುಡ್ಡದ ಮೇಲಕ್ಕೆ ಹೋಗಿ, ಅಗ್ನಿಕುಂಡವನ್ನು ಉರಿಸಿ ಒಂದೊಂದೇ ತಾಳ ಪತ್ರವನ್ನು ಓದಿ ಅಗ್ನಿಗೆ ಹಾಕ ತೊಡಗಿದನು. ಈ ವಿಧವಾಗಿ ಅವನ ಶ್ರಮವೂ, ಮಾಡಿದ ಉತ್ಕೃಷ್ಟ ರಚನೆಯೂ ಬೆಂಕಿಯ ಬಾಯಿಗೆ ಬೀಳುತಿದ್ದಿತು.

ಸುತ್ತುಮುತ್ತಲಿದ್ದ ಪಶು ಪಕ್ಷ್ಯಾದಿಗಳು ಅವನ ಪಠನಾ ಹೋಮದಿಂದ ಆಕರ್ಷಿತವಾಗಿ ಅಲ್ಲಿ ಸೇರಿ ಮೈಮರೆತುವು. ವೃಕ್ಷಗಳು ಕೂಡ ದುಃಖ ಭಾರದಿಂದ ತಲೆವಾಗಿದುವಂತೆ ! ಆದರೆ ಗುಣಾಢ್ಯನು ಅದಾವುದನ್ನೂ ಗಮನಿಸದೆ ತನ್ನ ರಚನೆಯನ್ನು ಓದುತ್ತಾ ಅಗ್ನಿಗೆ ಆಹುತಿ ಮಾಡುತ್ತಲೇ ಇದ್ದನು.







ಆ ಸಮಯದಲ್ಲಿ ರಾಜಾಸ್ಥಾನದ ಉದ್ಯೋಗಿಯೊಬ್ಬನು, ಆ ದಾರಿಯಾಗಿ ಸಾಗುತ್ತ ಗುಣಾಢ್ಯನನ್ನು ನೋಡಿದನು. ಕೂಡಲೇ ಅವನು ಓಡುತ್ತಾ ರಾಜನ ಬಳಿಗೆ ಹೋಗಿ ಗುಣಾಢ್ಯನು ಮಾಡುವ ಕೆಲಸವನ್ನು ಕುರಿತು ಹೇಳಿದನು. ಆಗ ರಾಜನಿಗೆ ತನ್ನ ತಪ್ಪು ತಿಳಿದು ತುಂಬಾ ವೇದನೆಯಾಯಿತು.




ಕೂಡಲೇ ರಾಜನು ಕುದುರೆಯ ಮೇಲೇರಿ ಗುಣಾಢ್ಯನಿರುವಲ್ಲಿಗೆ ಹೊರಟನು. ಮಂತ್ರಿ ಮೊದಲಾದವರೂ ಅವನನ್ನು ಅನುಸರಿಸಿದರು.

ರಾಜನು ಗುಣಾಢ್ಯನ ಬಳಿಗೆ ಬಂದು, "ಬೇಡ ! ಮಹಾ ಪಂಡಿತರಾದ ನೀವು ನನ್ನನ್ನು ಕ್ಷಮಿಸಿ ಬಿಡಿ. ತಮ್ಮ ಅಮೂಲ್ಯ ರಚನೆಯನ್ನು ಬೆಂಕಿಗೆ ಹಾಕಬೇಡಿ !" ಎಂದನು. ಆದರೆ ಅಷ್ಟು ಹೊತ್ತಿಗೆ ಆ ಗ್ರಂಥದ ಐದನೇ ಭಾಗ ಮಾತ್ರವೇ ಉಳಿದಿತ್ತು. ರಾಜನು ಆ ತಾಲ ಪತ್ರಗಳನ್ನು ತೆಗೆದುಕೊಂಡನು.







ಆ ಮೇಲೆ ಗುಣಾಢ್ಯನಿಗೆ ಎಣೆಯಿಲ್ಲದಷ್ಟು ರಾಜ ಸನ್ಮಾನಗಳು ನಡೆದುವು. ಅವನ ಪೂರ್ತಿ ರಚನೆ ಮಾತ್ರ ಲಭ್ಯವಾಗದೆ ಹೋಯಿತು. ಪೈಶಾಚಿಕ ಭಾಷೆ ಕೂಡಾ ಮರೆಯಲ್ಲಿ ಬಿದ್ದಿತು. ಆದರೆ ಅಗ್ನಿಯ ಪಾಲಾಗದೆ ಉಳಿದ ಬೃಹತ್ಕಥೆಯ ಅಂಶವನ್ನು ಕೆಲವು ಶತಮಾನಗಳ ಮೇಲೆ ಸೋಮದೇವನೆಂಬ ಪಂಡಿತನು "ಕಥಾ ಸರಿತ್ಸಾಗರ" ಎಂಬ ಹೆಸರಿನಿಂದ ಸಂಸ್ಕೃತದಲ್ಲಿ ಅನುವಾದಿಸಿದನು.

# ಸಾಲ ತೆಗೆಯುವ ಜಾಣ

**ಸಂ**ಕಜಪುರದ ಜಮೀನ್ದಾರರು ಕೆಲವರೊಂದಿಗೆ ಕುಳಿತು ಮಾತಾಡಿಕೊಂಡಿರುವಾಗ, ನೆರೆಯೂರಿನ ಮಲ್ಲಪ್ಪನು ಬಂದು, ಜಮೀನುದಾರರೊಂದಿಗೆ ತನ್ನ ಕುಮಾರಿಯ ಮದುವೆಗಾಗಿ ಮೂರು ಸಾವಿರ ರೂಪಾಯಿ ಸಾಲ ಬೇಕೆಂದು ಪ್ರಾರ್ಥಿಸಿಕೊಂಡನು.

"ಇಷ್ಟೊಂದು ಸಣ್ಣ ಸಾಲವನ್ನು ನಿನ್ನ ಊರಿನಲ್ಲಿ ಹುಟ್ಟಿಸುವ ಶಕ್ತಿ ನಿನಗಿಲ್ಲವೆಂದಾಯಿತು." ಎಂದರು ಜಮೀನ್ದಾರರು.

"ಪರಮಲೋಭಿಯಿಂದಾದರೂ ಸಾಲ ತೆಗೆದುಕೊಳ್ಳುವಷ್ಟು ಜಾಣತನ ನನಗುಂಟು. ಆದರೆ ನಾನು ನಿಮ್ಮ ಬಳಿಗೆ ಬಂದುದಕ್ಕೆ ಕಾರಣವಿದೆ ಸ್ವಾಮಿ. ತಮ್ಮ ಕೈಗುಣ ಕುರಿತು ಕೇಳಿದ್ದರಿಂದಲೇ ಇಷ್ಟು ದೂರ ಬಂದಿದ್ದೇನೆ" ಎಂದ ಮಲ್ಲಯ್ಯ.

"ನಮ್ಮ ಊರಿನಲ್ಲಿರುವ ಪೋಲಯ್ಯನ ಕೈಯಿಂದ ನೀನು ಸಾಲ ತೆಗೆದುಕೊಂಡರೆ ಐದು ಸಾವಿರ ಬೆಲೆಯ ನನ್ನ ಕಂಕಣ ನಿನಗೆ ಕೊಟ್ಟು ಬಿಡುತ್ತೇನೆ" ಎಂದರು ಜಮೀನ್ದಾರರು.

"ಆ ಕಂಕಣ ಮೊದಲು ಕೊಡಿರಿ. ಪೋಲಯ್ಯನ ಹತ್ತಿರ ಸಾಲ ತಕ್ಕೊಂಡು ಹಾಗಿಂದ ಹಾಗೇ ಹೊರಟು ಹೋಗುತ್ತೇನೆ. ಪುನಃ ಇಲ್ಲಿಗೆ ಬಂದು ಹೋಗುವಷ್ಟು ವ್ಯವಧಾನವಿಲ್ಲ. ಯಾರನ್ನಾದರೂ ನನ್ನ ಜತೆಗೆ ಕಳಿಸಿರಿ" ಎಂದ ಮಲ್ಲಯ್ಯ.

ಜಮೀನ್ದಾರರು ತುಸು ಆಲೋಚಿಸಿ ಮಲ್ಲಯ್ಯನ ಕೈಗೆ ತಮ್ಮ ಕಂಕಣವನ್ನು ಕೊಟ್ಟು, ಅವನೊಂದಿಗೆ ತನ್ನ ನಾಲ್ಕು ಮಂದಿ ಆಳುಗಳನ್ನು ಕೂಡಾ ಕಳುಹಿಸಿದರು.

ಮಲ್ಲಯ್ಯ ಪೋಲಯ್ಯನ ಹತ್ತಿರ ಆ ಕಂಕಣವನ್ನು ಒತ್ತೆ ಇಟ್ಟು, ಮೂರು ಸಾವಿರ ಸಾಲ ತೆಗೆದುಕೊಂಡು, ಆ ಸಂಗತಿ ಜಮೀನ್ದಾರರಿಗೆ ಹೇಳುವಂತೆ ಆಳುಗಳೊಂದಿಗೆ ಹೇಳಿ, ತನ್ನ ದಾರಿ ಹಿಡಿದು ಹೊರಟು ಹೋದನು.

ಅದನ್ನು ತಿಳಿದು ಜಮೀನ್ದಾರರು ಮೂಗಿನ ಮೇಲೆ ಬೆರಳಿಟ್ಟರು.





# ಬಡ್ಡಿ ವ್ಯವಹಾರ

ವಿಜಯನಗರದಲ್ಲಿ ರಾಮಪ್ರಸಾದನೆಂಬ ಲೇವಾದೇವಿ ವ್ಯವಹಾರದವನಿದ್ದನು. ಅವನು ತನ್ನ ವ್ಯಾಪಾರ ವ್ಯವಹಾರಗಳನ್ನು ಬಹಳ ಜಾಣತನದಿಂದ ನಿರ್ವಹಿಸಿಕೊಂಡಿದ್ದನು.

ಒಂದುದಿನ ಅವನು ತನ್ನ ಮಗನಾದ ವೆಂಕಟಪ್ರಸಾದನೊಂದಿಗೆ, "ನೋಡಪ್ಪಾ, ಮಗನೇ, ನನಗೆ ವೃದ್ಧಾಪ್ಯ ಸಮೀಪಿಸುತ್ತಾ ಇದೆ. ಒಂದುಸಾರಿ ತೀರ್ಥಯಾತ್ರೆ ಮಾಡಿ ಬರಬೇಕೆಂದಿದ್ದೇನೆ. ಇನ್ನು ಮುಂದೆ ನನ್ನ ವ್ಯಾಪಾರ ವ್ಯವಹಾರಗಳನ್ನು ನೀನೇ ನಿರ್ವಹಿಸಬೇಕಾಗಿ ಬರುತ್ತದೆ. ಇದರ ಮೇಲೆ ಶ್ರದ್ಧೆ ಇರಲಿ" ಎಂದನು.

ತಂದೆಯ ಮಾತಿಗೆ ವೆಂಕಟಪ್ರಸಾದನು ಒಪ್ಪಿಕೊಂಡು, "ಆ ಬಗ್ಗೆ ನೀವೇನೂ ಚಿಂತಿಸಬೇಡಿ ಅಪ್ಪಾ" ಎಂದನು. ರಾಮಪ್ರಸಾದನು ತನ್ನ ಪ್ರಯಾಣಕ್ಕೆ ಬೇಕಾದ ಏರ್ಪಾಡುಗಳನ್ನು ಮಾಡಿ, ಹೊರಡುವ ಮೊದಲು ಮಗನಿಗೆ, ಕೆಲವಾರು ವ್ಯವಹಾರ ರಹಸ್ಯಗಳನ್ನು ಹೇಳಿ, "ಅನುಭವದ ಮೇಲೆ ಇತರ ಸೂಕ್ಷ್ಮಗಳನ್ನು ನೀನೇ ತಿಳಿದುಕೊಳ್ಳುವಿ. ಏನಾದರೂ ಅನುಮಾನ ಬಂದರೆ ಹಳೆಯ ಲೆಕ್ಕಪುಸ್ತಕಗಳನ್ನು ನೋಡುತ್ತಾ ಇರು. ಸೂಕ್ಷ್ಮಗಳು ತಿಳಿದು ಬಂದಾವು" ಎಂದನು.

ತಂದೆ ತೀರ್ಥಯಾತ್ರೆಗೆ ಹೊರಟುಹೋದ ಮೇಲೆ ವೆಂಕಟ ಪ್ರಸಾದನು ಬಹು ಜಾಗರೂಕತೆಯಿಂದ ವ್ಯಾಪಾರ ವಿಷಯಗಳನ್ನು ನೋಡಿಕೊಳ್ಳ ತೊಡಗಿದನು.

ಒಂದುದಿನ ನಗರದಲ್ಲಿದ್ದ ಹಣ್ಣಿನ ವ್ಯಾಪಾರಿಯೊಬ್ಬನು ವೆಂಕಟಪ್ರಸಾದನ ಬಳಿಗೆ ಬಂದು, "ಅಯ್ಯಾ, ನನಗೆ ಅಗತ್ಯವಾಗಿ ನಾಲ್ಕು ಸಾವಿರ ವರಹಗಳು ಬೇಕಾಗಿವೆ. ಪತ್ರ ಬರೆಯಿಸಿಕೊಂಡು ಕೊಡಿರಿ ಸ್ವಾಮೀ" ಎಂದನು.

"ನಿನ್ನದು ಏನು ವ್ಯಾಪಾರ?" ಎಂದು ವೆಂಕಟಪ್ರಸಾದನು ಕೇಳಿದನು.

"ಹಣ್ಣಿನ ವ್ಯಾಪಾರ" ಎಂದು ಅವನು ಹೇಳಿದುದನ್ನು ಕೇಳಿ, "ಹೌದು, ಕೊಂಡುಕೊಳ್ಳುವುದೂ ಮಾರುವುದೂ ಎಂಬ ನಿನ್ನ ವ್ಯಾಪಾರದಲ್ಲಿ ದಿನಾ ನಿನ್ನ ಹತ್ತಿರ ಎಷ್ಟು ಹಣ ಓಡಾಡಿಕೊಂಡಿರುತ್ತೆ?" ಎಂದು ಕೇಳಿದನು ವೆಂಕಟಪ್ರಸಾದ, "ಐವತ್ತು ವರಹಗಳಿಗೆ ಕಡಿಮೆಯಿಲ್ಲದೆ ಇರುತ್ತೆ ಸ್ವಾಮೀ. ದಯ

ಎಂ. ವಿ. ಕೃಷ್ಣಮೂರ್ತಿ

ಮಾಡಬೇಕು" ಎಂದು ಹಣ್ಣಿನ ವ್ಯಾಪಾರಿ ಬಾಗಿ ಕೈಮುಗಿದು ಬೇಡಿಕೊಂಡನು.

ವೆಂಕಟಪ್ರಸಾದನಿಗೆ ಒಂದು ಅನುಮಾನ ಉಂಟಾಯಿತು. ದಿನಕ್ಕೆ ಐವತ್ತು ವರಹಗಳ ಹಾಗೆ, ತಿಂಗಳಿಗೆ ಸುಮಾರು ನೂರೈವತ್ತು ವರಹಗಳಿಗಿಂತ ಹೆಚ್ಚು ವ್ಯಾಪಾರ ಮಾಡಲಾಗದವನು, ನಾಲ್ಕು ಸಾವಿರ ವರಹಗಳ ಸಾಲವನ್ನು ಬಡ್ಡಿಯೊಂದಿಗೆ ತೀರಿಸುವುದು ಸಾಧ್ಯವಿಲ್ಲವೆಂದು ನಿರ್ಣಯಿಸಿ ಕೊಂಡನು.

"ನಾಲ್ಕು ಸಾವಿರ ವರಹಗಳನ್ನು ಕೊಡಲು ಸಾಧ್ಯವಿಲ್ಲಪ್ಪ. ಸಾವಿರ ವರಹ ಕೊಡುತ್ತೇನೆ. ಇಷ್ಟವಿದ್ದರೆ ತೆಗೆದುಕೊಂಡು ಹೋಗು" ಎಂದನು ವೆಂಕಟಪ್ರಸಾದ.

ಆ ಮಾತನ್ನು ಕೇಳಿ ಹಣ್ಣಿನವನು ಆಶ್ಚರ್ಯ ಪಡುತ್ತ, "ಅದೇನು ಸ್ವಾಮಿ, ನಿಮ್ಮ ತಂದೆ ಯವರು ನನಗೆ ಆರು ಸಾವಿರ ವರಹಗಳ ವರೆಗೂ ಸಾಲಕೊಟ್ಟ ಸಂದರ್ಭಗಳಿವೆ" ಎಂದನು.

ಅಷ್ಟರಲ್ಲಿ ವಜ್ರಗಳ ವ್ಯಾಪಾರಿ ಅಲ್ಲಿಗೆ ಬಂದು, ವೆಂಕಟಪ್ರಸಾದನನ್ನು ನೋಡಿ, "ನನಗೆ ಒಂದು ಹತ್ತು ಸಾವಿರ ವರಹಗಳು ಬೇಕಾಗಿವೆ" ಎಂದನು ದರ್ಪದ ಧೋರಣೆಯಲ್ಲಿ.

ಆ ವಜ್ರದ ವ್ಯಾಪಾರಿಗೆ ದೊಡ್ಡ ಪೇಟೆಯಲ್ಲಿ ಲಕ್ಷ ವರಹಗಳಿಗೆ ಮಿಂಚಿ ಬೆಲೆಬಾಳುವಂತಹ ನಗಗಳ ಅಂಗಡಿಯಿದೆಯೆಂದು ವೆಂಕಟಪ್ರಸಾದನಿಗೆ ಗೊತ್ತಿತ್ತು. ಅವನು ಏನೂ ಅಭ್ಯಂತರ ಹೇಳದೆ, ವಜ್ರಗಳ ವ್ಯಾಪಾರಿಗೆ ಅವನು ಕೇಳಿದ ಮೊತ್ತವನ್ನು ಎಣಿಸಿಕೊಟ್ಟು, ಪತ್ರ ಬರೆಸಿಕೊಂಡು ಕಳುಹಿಸಿದನು.

ಹಣ್ಣಿನ ವ್ಯಾಪಾರದವನು ಎಷ್ಟೇ ಕೇಳಿ ಕೊಂಡರೂ ಒಂದು ಸಾವಿರಕ್ಕಿಂತ ಹೆಚ್ಚು ಕೊಡಲೇ ಇಲ್ಲ ವೆಂಕಟಪ್ರಸಾದ.

ಆ ತರುವಾಯ ಪ್ರತಿ ತಿಂಗಳಲ್ಲಿಯೂ ಹಣ್ಣಿನ ವ್ಯಾಪಾರಿ ಸ್ವಲ್ಪ ಹಣವನ್ನು ತೆಗೆದುಕೊಂಡು ಬಂದು ತನ್ನ ಸಾಲದ ಖಾತೆಯಲ್ಲಿ ಜಮೆ ಮಾಡುತ್ತಾ ಬರುತ್ತಿದ್ದನು. ಆದರೆ ವಜ್ರದ ವ್ಯಾಪಾರಿ ನಾಲ್ಕು



ತಿಂಗಳು ಕಳೆದರೂ ಈ ಕಡೆಗೆ ಮುಖ ತೋರಿಸ ಲಿಲ್ಲ. ಹಣಕ್ಕಾಗಿ ಸಮಾಚಾರ ಕಳುಹಿಸಿದರೆ, ಸರಿಯಾದ ಸಮಾಧಾನ ಕೂಡಾ ಕೊಡಲಿಲ್ಲ. ವಿಚಾರಿಸಲು ಹೋದ ಆಳು ಬರಿಗೈಯಿಂದ ಹಿಂದಿರುಗುತ್ತಿದ್ದನು. ಇಷ್ಟರೊಳಗೆ ಹಣ್ಣಿನ ವ್ಯಾಪಾರಿ ತನ್ನ ಸಾಲದಲ್ಲಿ ಅರ್ಧದಷ್ಟನ್ನು ಹಿಂದಿರುಗಿಸಿದ್ದನು.

ಹೀಗಿರಲು ರಾಮುಪ್ರಸಾದನು ತೀರ್ಥಯಾತ್ರೆ ಯಿಂದ ಹಿಂದಿರುಗಿ ಬಂದು, ಒಂದುದಿನ ಲೆಕ್ಕಗಳ ಖಾತಾಪುಸ್ತಕವನ್ನು ಪರಿಶೀಲಿಸಿಕೊಂಡಿರುವಾಗ, ಮಗನು ವಜ್ರದ ವ್ಯಾಪಾರಿಗೂ, ಹಣ್ಣಿನ ವ್ಯಾಪಾರಿಗೂ ಕೊಟ್ಟ ಸಾಲದ ಲೆಕ್ಕ ಕಾಣಿಸಿತು.

ಅದನ್ನು ನೋಡಿ ಅವನು ಮಗನನ್ನು ಕರೆದು, "ಆ ವಜ್ರದ ವ್ಯಾಪಾರಿಗೆ ಅಷ್ಟು ದೊಡ್ಡ ಮೊತ್ತ ಹತ್ತು ಸಾವಿರ ಏಕೆ ಸಾಲ ಕೊಟ್ಟೆ ? " ಎಂದು ಕೇಳಿದನು.

ವೆಂಕಟಪ್ರಸಾದನು ತಪ್ಪು ಮಾಡಿದವನ ಹಾಗೆ ಮುಖವಿಟ್ಟುಕೊಂಡು, "ಒಳ್ಳೇ ಹಣವಂತ. ಸಾಲ ತೀರಿಸುವ ಶಕ್ತಿಯಿರುವವನೆಂದು ನಂಬಿ ಕೊಟ್ಟೆನು ಅಪ್ಪಾ. ಇವತ್ತಿನ ವರೆಗೂ ಚಿಕ್ಕಾಸೂ ಬರಲಿಲ್ಲ." ಎಂದನು.

"ನಾನು ತೀರ್ಥಯಾತ್ರೆಗೆ ಹೋಗುವ ಸಮಯಕ್ಕೆ ನಿನಗೆ ಕೆಲವು ವ್ಯವಹಾರ ರಹಸ್ಯಗಳನ್ನು ಹೇಳಿದ್ದೇನೆ. ನಮ್ಮ ವ್ಯವಹಾರದಲ್ಲಿರುವ ಮುಖ್ಯ ವಿಷಯವೊಂದು ಹೇಳಲು ಮರೆತೆನೆಂದು ಕಾಣುತ್ತೆ. ನಾವು ಸಾಲ ಕೊಡುವಾಗ ತೆಗೆದುಕೊಳ್ಳುವ ಮನುಷ್ಯನ ಆರ್ಥಿಕ ಸ್ಥಾಯಿಗಿಂತಲೂ ಮುಖ್ಯವಾಗಿ ನೋಡಬೇಕಾದ್ದು, ಅವನಲ್ಲಿ ಸಾಲವನ್ನು ಬೇಗನೇ ತೀರಿಸಬೇಕೆಂಬ ತಪನವಿದೆಯೋ ಇಲ್ಲವೋ ಎಂಬುದನ್ನೇ. ಅಂಥವರಿಗೆ ನಾವು ಅವರ ಸ್ಥಾಯಿ ಗಿಂತಲೂ ಹೆಚ್ಚೇ ಸಾಲಕೊಟ್ಟರೂ ತೀರಿಸಿಬಿಡುವ ರೆಂದು ನಂಬಬಹುದು. ಆ ವಜ್ರಗಳ ವ್ಯಾಪಾರಿಗೆ ಧನವಿದೆಯೇ ಹೊರತು ಪ್ರಾಮಾಣಿಕತೆ ಇಲ್ಲ." ಎಂದನು ರಾಮುಪ್ರಸಾದ.

ಆಮೇಲೆ ವೆಂಕಟಪ್ರಸಾದನಿಗೆ ಒಂದು ಮದುವೆಯ ಸಂಬಂಧ ಕೂಡಿಬಂತು. ರಾಮುಪ್ರಸಾದನು ಅದೇ ವಜ್ರಗಳ ವ್ಯಾಪಾರಿಯ ಅಂಗಡಿಗೆ ಹೋಗಿ, ತನ್ನ ಸೊಸೆಗೆ ಹಾಕಬೇಕೆಂದು ನಿಶ್ಚಯಿಸಿದ ನಗಗಳನ್ನು ಕೊಂಡುಕೊಂಡನು. ಅವುಗಳ ಬೆಲೆ ಆ ವ್ಯಾಪಾರಿ ಯಿಂದ ತನಗೆ ಬರಬೇಕಾದ ಹತ್ತು ಸಾವಿರ ಅಸಲೂ ಬಡ್ಡಿಯೂ ಸರಿಹೋಗುವ ಹಾಗೆ ನೋಡಿ ಕೊಂಡು, ಆ ಸಾಲವನ್ನು ಜಮೆ ಮಾಡಿಸಿಕೊಂಡನು.

ಈ ಅನುಭವದಿಂದ ವೆಂಕಟಪ್ರಸಾದನು ತಂದೆಯ ವ್ಯಾಪಾರ ವ್ಯವಹಾರಗಳನ್ನು ಸರಿಯಾಗಿ ನೋಡು ವಷ್ಟು ಸಮರ್ಥನಾದನು.



# ಗೆರಸೆ, ಜಲ್ಲಡಿ

ಒಬ್ಬ ರಾಜನಿದ್ದನು. ಅವನ ಆಸ್ಥಾನದಲ್ಲಿ ಒಬ್ಬ ಉನ್ನತೋದ್ಯೋಗಿಯ ಸ್ಥಾನವು ಖಾಲಿಯಾಯಿತು. ಅಂತಹ ಸ್ಥಾನಗಳಿಗೆ ಹೊಸಬರನ್ನು ನಿಯಮಿಸಬೇಕಾಗಿ ಬಂದಾಗ ರಾಜನು ಅವರನ್ನು ತಾನೇ ಸ್ವತಃ ಪರೀಕ್ಷಿಸುವುದಿಲ್ಲ. ತನ್ನ ಗುರುವಿನ ಕಡೆಗೆ ಅವರನ್ನು ಕಳುಹಿಸಿ, ಆ ಗುರುಗಳಿಂದಲೇ ಪರೀಕ್ಷೆ ಮಾಡಿಸುತ್ತಿದ್ದನು.

ಅಂತೆಯೇ ಆ ಉದ್ಯೋಗಕ್ಕಾಗಿ ಬಂದ ರಾಮಶಾಸ್ತ್ರಿಯನ್ನೂ, ಗೋಪಾಲಶಾಸ್ತ್ರಿಯನ್ನೂ ರಾಜನು ತನ್ನ ಗುರುಗಳ ಬಳಿಗೆ ಕಳುಹಿಸಿ ಕೊಟ್ಟನು.

ಗುರುಗಳು ತಾವು ಪರೀಕ್ಷಿಸಿದವರ ಕೈಗೆ ಏನೋ ಒಂದು ವಸ್ತುವನ್ನು ಕೊಟ್ಟು ರಾಜನ ಬಳಿಗೆ ಕಳುಹಿಸುವರು. ಆ ವಸ್ತುವನ್ನು ನೋಡಿ ಅದನ್ನು ತಂದ ವ್ಯಕ್ತಿಯ ಸ್ವಭಾವವನ್ನು ರಾಜನು ಅರ್ಥಮಾಡಿ ಕೊಳ್ಳುತ್ತಿದ್ದನು. ಇದೇ ವಾಡಿಕೆಯಾಗಿತ್ತು.

ಈ ಸಾರಿ ಗುರುಗಳ ಹತ್ತಿರ ಪರೀಕ್ಷೆಗೆ ಹೋದ ರಾಮಶಾಸ್ತ್ರಿ ಒಂದು ಗೆರಸೆಯೊಂದಿಗೂ, ಗೋಪಾಲ ಶಾಸ್ತ್ರಿ ಒಂದು ಜಲ್ಲಡಿಯೊಂದಿಗೂ ರಾಜನ ಬಳಿಗೆ ಹಿಂದಿರುಗಿದರು.

ರಾಜನಿಗೆ ಎಷ್ಟು ಆಲೋಚನೆ ಮಾಡಿದರೂ ಗುರುಗಳ ಅಭಿಪ್ರಾಯವು ಅರ್ಥವಾಗದೆ, ಆ ಕೆಲಸವನ್ನು ತನ್ನ ಆಸ್ಥಾನದ ಪುರೋಹಿತನಿಗೆ ಒಪ್ಪಿಸಿದನು.

ಪುರೋಹಿತನಿಗೆ ಕೂಡಾ ಎಷ್ಟು ಯೋಚಿಸಿದರೂ ಗುರುಗಳ ಅಭಿಪ್ರಾಯ ಗೊತ್ತಾಗಲಿಲ್ಲ. ಅವನು ಗೆರಸೆ ಜಲ್ಲಡಿಗಳನ್ನು ಕುರಿತೇ ಆಲೋಚಿಸುತ್ತಾ ಮನೆಗೆ ಹೋದಾಗ, ಅವನ ಹೆಂಡತಿ ಗೆರಸೆಯಲ್ಲಿ ಕುಟ್ಟಿದ ಅಕ್ಕಿಯನ್ನು ಗೇರಿಕೊಂಡಿದ್ದಳು.

ಮರುದಿನ ಪುರೋಹಿತನು ರಾಜನೊಂದಿಗೆ, "ಮಹಾರಾಜಾ, ಗುರುಗಳ ಅಭಿಪ್ರಾಯ ಹೀಗೆ. ರಾಮಶಾಸ್ತ್ರಿ ಗೆರಸೆಯ ಹಾಗೆ ಬೇಕಾದುದನ್ನು ಇಟ್ಟುಕೊಂಡು, ಬೇಡಾದುದನ್ನು ದೂರ ಮಾಡುವಂತಹ ವಿವೇಕಿ. ಗೋಪಾಲಶಾಸ್ತ್ರಿ ಹಾಗಲ್ಲ, ಜಲ್ಲಡಿಯ ಹಾಗೆ ಉಪಯೋಗವಾದುದನ್ನು ಜಾರಬಿಟ್ಟು ಉಪಯೋಗವಿಲ್ಲದ್ದನ್ನು ತನ್ನಲ್ಲೇ ಇರಿಸಿಕೊಳ್ಳುವ ಮಂದಮತಿ" ಎಂದನು.

ರಾಜನು ರಾಮಶಾಸ್ತ್ರಿಯನ್ನು ಖಾಲೀಬಿದ್ದ ಉನ್ನತೋದ್ಯೋಗದಲ್ಲಿ ನಿಯಮಿಸಿಕೊಂಡನು.





# ದೈವದಾಟ

ಅನೇಕ ವರ್ಷಗಳ ಹಿಂದೆ ಕಾಳಿಂದೀ ನದಿಯ ತೀರದಲ್ಲಿ ಪುಂಜಿಕವೆಂಬೊಂದು ಗ್ರಾಮವಿತ್ತು. ಅಲ್ಲಿ ಪ್ರಜ್ಞಾವಂತನೆಂಬ ಒಬ್ಬ ಬ್ರಾಹ್ಮಣನು ವಾಸವಾಗಿದ್ದನು. ಅವನ ಹೆಸರೇನೋ ದೊಡ್ಡದಾಗಿದ್ದರೂ ಅವನು ಯಾವುವಕ್ಕೂ ಉಪಯೋಗವಿಲ್ಲದ ದೌರ್ಭಾಗ್ಯದವನಾಗಿದ್ದನು. ಕಾಗೆಯ ಮೂಗಿಗೆ ತೊಂಡೇಹಣ್ಣು ಕಟ್ಟಿದ ಹಾಗೆ ಆ ಕುರೂಪಿಯೂ ನಿರೂಪಯೋಗಿಯೂ ಆದ ಬ್ರಾಹ್ಮಣನಿಗೆ ಸುಲೋಚನೆಯೆಂಬ ಹುಡುಗಿಯೊಂದಿಗೆ ವಿವಾಹ ಮಾಡಿಸಲು ಎಲ್ಲಾ ಏರ್ಪಾಡೂ ನಡೆದಿತ್ತು. ಸುಲೋಚನೆ ರಂಭೆಯ ಹಾಗೆ ಚೆಲುವೆ. ಆದರೆ ಅವಳ ತಂದೆ ತಾಯಿಂದಿರು ಪ್ರಜ್ಞಾವಂತನು ಧನಿಕನೆಂದೂ. ಎಲ್ಲರಿಗೂ ಗೊತ್ತಿರುವವನೆಂದೂ, ಊರೊಳಗಿನವನಾದುದರಿಂದ ಮಗಳು ತಮ್ಮ ಹತ್ತಿರವೇ ಇದ್ದ ಹಾಗೆಂದೂ ಆಲೋಚಿಸಿ ಈ ಸಂಬಂಧವನ್ನು ನಿಶ್ಚಯಿಸಿದ್ದರು. ಹುಡುಗಿಗೆ ಇಷ್ಟವಿದೆಯೋ ಇಲ್ಲವೋ ಎಂಬುದರ ಯೋಚನೆ ಯಾರಿಗೂ ಇರಲಿಲ್ಲ.

ಮುಹೂರ್ತದ ದಿನ ಸುಲೋಚನೆಯನ್ನು ಮದುಮಗಳ ಹಾಗೆ ಅಲಂಕರಿಸ ತೊಡಗಿದರು. ಅವಳಿಗಂತೂ ಈ ಮದುವೆ ಸ್ವಲ್ಪವೂ ಇಷ್ಟವಿರಲಿಲ್ಲ. ಬೆಳಗಾದರೆ ಮದುವೆಯ ಮುಹೂರ್ತವೆನ್ನುವಾಗ, ಬೆಳಂಜಾವದ ಮಸಕು ಕತ್ತಲೆಯಲ್ಲಿ ಸುಲೋಚನೆ, ತಲೆಯಮೇಲೊಂದು ಬಟ್ಟೆಯನ್ನು ಹಾಕಿಕೊಂಡು, ಕಂಕುಳಲ್ಲಿ ಬಿಂದಿಗೆಯನ್ನು ಹಿಡಿದು ಕಾಳಿಂದೀನದಿಗೆ ಹೋದಳು. ಬಿಂದಿಗೆಯನ್ನು ತೀರದಲ್ಲಿಟ್ಟು ಇಹಲೋಕದ ಬದುಕಿನ ಮೇಲೆ ಆಸೆಯನ್ನು ಬಿಟ್ಟು ನದಿಯಲ್ಲಿ ಹಾರಲು ನೋಡುವಾಗ, ಹಿಂದಿನಿಂದ ಯಾರೋ ಅವಳನ್ನು ಹಿಡಿದುಕೊಂಡರು.

ಆ ವಿಧವಾಗಿ ಸುಲೋಚನೆಯನ್ನು ಆತ್ಮಹತ್ಯ ಮಾಡಿಕೊಳ್ಳದಂತೆ ತಡೆದವನು ವಿತ್ತಕರ್ಮನೆಂಬ ಯುವಕ. ಅವನು ದಕ್ಷಿಣದ ಕುಂಭಕೋಣವೆಂಬ ನಗರದಲ್ಲಿ ವ್ಯಾಪಾರ ಮಾಡಿಕೊಂಡಿದ್ದನು. ಆದರೆ ಅವನ ಸ್ವಂತ ಊರು ಕಾಳಿಂದೀ ನದಿಯ ಈಚೆಗಿನ ಪ್ರಾಂತವೇ ಆಗಿತ್ತು. ಅವನು ತಕ್ಕ ಕನ್ಯೆಯನ್ನು ನೋಡಿ ಮದುವೆ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಸ್ವಂತ ಊರಿಗೆ ಬಂದು ಅನೇಕ ಕನ್ಯೆಗಳನ್ನು ನೋಡಿಯಾಗಿತ್ತು. ಯಾರೂ ಹಿಡಿಸಿರಲಿಲ್ಲ. ಇನ್ನು ಬೇರೆ ಗ್ರಾಮಗಳಿಗೆ ಹೋಗೋಣವೆಂದು ಅವನು

ಕುದುರೆಯ ಮೇಲೆ ನದಿಯ ತೀರವನ್ನು ಹಿಡಿದು ಬರುತ್ತಿರುವಾಗ, ದೂರದಲ್ಲೇ ಸುಲೋಚನೆಯ ರೀತಿಯನ್ನು ನೋಡಿದನು. ಕೂಡಲೇ ಕುದುರೆಯಿಂದಿಳಿದು ಅವಳನ್ನು ಸಮೀಪಿಸಿದನು. ಅವಳು ಹಿಂದಿರುಗಿ ನೋಡುವ ರೀತಿ ಅವನಿಗೆ ಅನುಮಾನವೆನಿಸಿತು. ಅಂತಲೇ ಧಾವಿಸಿ ಬಂದು ದೇವರ ಹಾಗೆ ಅವಳನ್ನು ಕಾಪಾಡಿದನು.

"ಮದುಮಗಳ ವೇಷದಲ್ಲಿರುವ ನಿನ್ನದು ಇದೆಂಥ ಕೆಲಸ ? ಯಾರು ನೀನು ? ಏತಕ್ಕಾಗಿ ಇಂತಹ ಸಾಹಸಕ್ಕಿಳಿದೆ ?" ಎಂದು ವಿತ್ತಕರ್ಮನು ಸುಲೋಚನೆಯನ್ನು ಕೇಳಿದನು.

ಅವಳು ಮುಚ್ಚು ಮರೆಯಿಲ್ಲದೆ ನಡೆದ ವಿಷಯವನ್ನು ಹೇಳಿ, "ಅಂತಹ ಗಂಡನನ್ನು ಮಾಡಿಕೊಳ್ಳುವುದಕ್ಕಿಂತ ಸತ್ತುಸುಮ್ಮನಾಗುವುದೇ ಒಳ್ಳೇದೆನಿಸಿತು. ನೀವು ಸಮಯಕ್ಕೆ ಬಂದು ನನ್ನ ಪ್ರಯತ್ನವನ್ನು ಕೆಡಿಸಿದಿರಿ. ಇನ್ನು ಅವರು ಹುಡುಕಿಕೊಂಡು ಬಂದು ನನ್ನನ್ನು ಸಾಯಲೂ ಬಿಡರು, ಬದುಕಲೂ ಬಿಡರು" ಎಂದಳು ಕಣ್ಣೀರು ಸುರಿಸುತ್ತಾ,

"ಒಳ್ಳೇದೇ ಆಯಿತು ಅನ್ನು. ನನ್ನೊಂದಿಗೆ ಬರುವಿಯಾ ? ನಾನು ಕನ್ಯಾನ್ವೇಷಣೆ ಮಾಡುತ್ತಾ ತಿರುಗುತ್ತಿದ್ದೇನೆ. ಎಷ್ಟೋ ಕನ್ಯೆಯದನ್ನು ನೋಡಿದೆನಾದರೂ ನಿನ್ನಂಥವಳು ಮಾತ್ರ ಕಾಣಲೇ ಇಲ್ಲ. ನೋಡಿದ ಕೂಡಲೇ ನಿನ್ನ ಸೌಂದರ್ಯ ನನಗೆ ಹಿಡಿಸಿತು. ದಕ್ಷಿಣದಲ್ಲಿ ನಿನ್ನ ಕಡೆಯವರಿಗೆ ದೂರವಾಗಿರಲು ನಿನಗೇನೂ ಅಭ್ಯಂತರವಿಲ್ಲದಿದ್ದರೆ ನಿನ್ನನ್ನು ಕರೆದುಕೊಂಡು ಹೋಗಿ ಮದುವೆ ಮಾಡಿಕೊಳ್ಳುತ್ತೇನೆ. ನಿನಗೆ ಯಾವ ಭಯವೂ ಇಲ್ಲ" ಎಂದನು ವಿತ್ತಕರ್ಮ.

"ಆತ್ಮಹತ್ಯ ಮಾಡಿಕೊಳ್ಳಲು ಬಂದ ಕೂಡಲೇ ನಾನು ನನ್ನವರನ್ನೆಲ್ಲಾ ಬಿಟ್ಟುಬಿಟ್ಟೆನು. ಅವರು ನನಗೆ ಮಾಡಿದ ಒಳಿತಾದರೂ ಏನಿದೇ ? ನನ್ನನ್ನು



ಸಾಯಲಿಕ್ಕೆ ತಾನೇ ಬಿಟ್ಟರು ? ಆದ್ದರಿಂದ ಇನ್ನು ಮೇಲೆ ನೀವೇ ನನ್ನನ್ನು ಮದುವೆ ಮಾಡಿಕೊಳ್ಳಬೇಕು. ಹಾಗೆ ಮಾಡಿದರೆ ಅದು ನನ್ನ ಸಂತೋಷದ ಹೊಸ ಜನ್ಮ ಅಂದುಕೊಳುತ್ತೇನೆ" ಎಂದಳು ಸುಲೋಚನೆ ದೀನಳಾಗಿ.

ವಿತ್ತಕರ್ಮನು ಅವಳನ್ನು ತನ್ನ ಕುದುರೆಯ ಮೇಲೆ ಏರಿಸಿಕೊಂಡು, ಬಹುಬೇಗನೇ ಕುದುರೆಯನ್ನು ಓಡಿಸುತ್ತಾ, ಅನೇಕ ಗ್ರಾಮಗಳನ್ನು ದಾಟಿ, ಸೀದಾ ಕುಂಭಕೋಣಕ್ಕೆ ಹೊರಟು ಹೋದನು.

ನದಿಯ ತೀರದಿಂದ ಅವರಿಬ್ಬರೂ ಹೊರಟು ಹೋದ ಸ್ವಲ್ಪ ಹೊತ್ತಿನ ಮೇಲೆ ಊರೊಳಗಿನವರು ಕೆಲವರು ಅಲ್ಲಿಗೆ ಬಂದು ತೀರದಲ್ಲಿ ಅನಾಥವಾಗಿರುವ ಬಿಂದಿಗೆಯನ್ನು ನೋಡಿದರು. ಯಾರೋ ನೀರಿನಲ್ಲಿ ಬಿದ್ದು ಸತ್ತರೆಂದು ಊರೊಳಗೆ ವಾರ್ತೆ ಹರಡಿಸಿದರು. ಆ ಬಿಂದಿಗೆಯ ಗುರುತಿನಿಂದಲೂ, ಎಲ್ಲಿಯೂ ಸುಲೋಚನೆ ಕಾಣದಿರುವುದರಿಂದಲೂ ಮದು

ಮಗಳೇ ನೀರಿಗೆ ಎರೆಯಾದಳೆಂದು ಎಲ್ಲರೂ ನಿರ್ಧಸಿ ಕೊಂಡರು. ಮದುವೆಗೆ ಬಂದವರೆಲ್ಲಾ ಸುಲೋಚನೆಯ ಮರಣವನ್ನು ಕುರಿತು ತಲಾ ಒಂದೊಂದು ವಿಧವಾಗಿ ಆಶ್ಚರ್ಯದಿಂದ ಹೇಳಿಕೊಂಡರು. ಹೀಗೆ ಊರವರ ಬಾಯಿಯಲ್ಲಿ ಅವಳು ಸತ್ತು ಹೋದಳು.

ಗಂಡುಸಾದವನು ಎಷ್ಟೇ ಅಪ್ರಯೋಜಕನಾದರೂ ಮದುವೆಯಾಗುವೆನೆಂದರೆ ಅವನಿಗೊಂದು ಹೆಣ್ಣು ಸಿಗದೆ ಹೋಗುವುದಿಲ್ಲ. ಕೆಲವು ವಾರಗಳು ಕಳೆದ ಮೇಲೆ ರಾಧೆ ಎಂಬ ಹುಡಗಿಯೊಂದಿಗೆ ಪ್ರಜ್ಞಾ ವಂತನಿಗೆ ಮದುವೆಯಾಯಿತು. ಮುಂದೆ ಬೇಗದಲ್ಲೇ ರಾಧೆ ಗರ್ಭವತಿಯೂ ಆದಳು. ಸಾಮಾನ್ಯವಾಗಿ ಗರ್ಭ ಧರಿಸಿದ ಪ್ರಾರಂಭ ದಿನಗಳಲ್ಲಿ ಹೆಂಗುಸರ ಆರೋಗ್ಯ ಸರಿಯಾಗಿರುವುದಿಲ್ಲವಷ್ಟೆ? ರಾಧೆಗೆ ಆಗಾಗ ವಾಂತಿಯೂ ಮಯಕವೂ ಬರತೊಡಗಿತು. ಹೇಗೋ ಏನೋ ಎಂದು ಅವಳು ಹೆದರುತ್ತಿರಲು, ಅದಕ್ಕೆ ತಕ್ಕ ಹಾಗೆ ನೆರೆಕರೆಯ ಅಮ್ಮಂದಿರು ಅಕ್ಕಂದಿರು ಬಂದು "ನಿನಗೆ ಒಂದೂ ಗೊತ್ತಿಲ್ಲ! ಗರ್ಭಿಣಿಯಾಗಿದ್ದರೆ ಆ ನದೀ ಬದಿಗೆ ಯಾಕೆ ಹೋದೆ? ಸುಲೋಚನೆ ಅಲ್ಲಿ ದೆವ್ವವಾಗಿ ತಿರುಗುತ್ತಾ ಇರುತ್ತಾಳೆ. ಮದುವೆಯಾಗಲಿರುವ ದಿನವೇ ಅವಳು ಬಲವಂತದಿಂದ ಸತ್ತವಳು. ಅವಳ ಗಂಡನಾಗ ಬೇಕಾದವನೇ ನಿನ್ನಗಂಡನಾದ್ದರಿಂದ, ನಿನ್ನನ್ನು ಹಿಡಿಯದೆ ಬಿಟ್ಟಾಳೆ? ಅದಕ್ಕೇ ಹೀಗೆಲ್ಲಾ ಆಗುತ್ತದೆ" ಎಂದು ಮುಂತಾಗಿ ರಾಧೆಗೆ ಪುಕ್ಕಲು ಪುಡಿಗಳನ್ನು ಹಾಕುತ್ತಾ ಬಂದರು.

ರಾಧೆಗೆ ಮಾತ್ರವಲ್ಲದೆ, ಹೊಟ್ಟೆಯೊಳಗಿನ ಶಿಶುವಿಗೂ ಏನಾದರೂ ಆದೀತೆಂದು ಹೆದರಿಕೊಂಡು ಪ್ರಜ್ಞಾವಂತನು ಮಾಂತ್ರಿಕನಿಂದ ಅಂಜನ ಹಾಕಿಸಿದನು. ಪ್ರಶ್ನೆ ಕೇಳಿಸಿದನು. ಎಲ್ಲರೂ ಸುಲೋಚನೆ ದೆವ್ವ ವಾಗಿ ರಾಧೆಯನ್ನು ಹಿಡಿದಳೆಂದು ಹೇಳುವವರೇ. ಪ್ರಜ್ಞಾವಂತನಿಗೆ ದೆವ್ವದ ಮೇಲೆ ಒಳ್ಳೆಯ ನಂಬುಗೆ ಕುಳಿತಿತು. ಅವನು ಒಬ್ಬನಿಗಿಂತೊಬ್ಬನು ದೊಡ್ಡವ ನೆನಿಸಿದ ಭೂತಮಾಂತ್ರಿಕರಿಂದ ಮಂತ್ರಮಾಡಿಸಿ ಹೆಂಡತಿಗೆ ತಾಯಿತ್ತುಗಳನ್ನು ಕಟ್ಟಿಸಿದನು, ನಾಲ್ವರು



ಮಾಂತ್ರಿಕರು ದೆವ್ವವನ್ನು ಹಿಡಿದು ಭೂಸ್ಥಾಪನೆ ಮಾಡಿದರು. ಕ್ರಮವಾಗಿ ರಾಧೆಯ ಆರೋಗ್ಯ ಸರಿಯಾದ ಹಾಗೆ ತೋರಿತು. ದೆವ್ವಬಿಟ್ಟು ಹೋಯಿತೆಂದು ಎಲ್ಲರೂ ಅಂದುಕೊಂಡರು. ರಾಧೆ ಒಳಗೊಳಗೇ ಹೆದರಿಕೊಂಡಿದ್ದಳೇ ಹೊರತು ಬಾಯಿ ಬಿಡಲಿಲ್ಲ.

ತಿಂಗಳು ಪೂರ್ತಿ ತುಂಬುವುದರೊಳಗೇ ರಾಧೆಗೆ ಪ್ರಸವವಾಯಿತು. ಹುಟ್ಟಿದ ಘಳಿಗೆಯಲ್ಲಿ ಆ ಮಗು ಸತ್ತೂ ಹೋಯಿತು. ಅದು ದೆವ್ವದ ಕೆಲಸವೇ ಹೌದೆಂದು ಎಲ್ಲರೂ ಹೇಳಿದರು. "ಎಷ್ಟು ಮಾಂತ್ರಿಕರು ಎಷ್ಟೆಲ್ಲ ಮಂತ್ರ ಮಾಡಿ ಏನು ಲಾಭ? ಈ ಕ್ಷುದ್ರೋಪಾಸಕರಿಂದ ಈ ಹೆಣ್ಣು ದೆವ್ವ ಬಿಡುವಂತಹುದಲ್ಲ. ಮುಂದಾದರೂ ಒಳಿತಾಗ ಬೇಕಾದರೆ ತೀರ್ಥ ಯಾತ್ರೆ ಮಾಡುವುದೇ ಒಳ್ಳೇದು. ಪುಣ್ಯ ತೀರ್ಥಗಳಿಗೆ ದೆವ್ವವನ್ನು ಓಡಿಸುವ ಶಕ್ತಿಯಿದೆ!" ಎಂದು ಹಿರಿಯರು ಪ್ರಜ್ಞಾವಂತನಿಗೆ ಹಿತಬೋಧೆ ಮಾಡಿದರು.

"ಅದೊಂದೂ ಬೇಡ. ರಾಮೇಶ್ವರಕ್ಕೆ ಹೋಗುವುದೇ ಒಳ್ಳೇದು. ರಾಮೇಶ್ವರದ ಮಹಿಮೆ ಸಾಮಾನ್ಯವಲ್ಲ. ಒಬ್ಬನಿಗೆ ಹೀಗೆಯೇ ದೆವ್ವ ಹಿಡಿದರೆ, ರಾಮೇಶ್ವರಕ್ಕೆ ಹೋದ ಕೂಡಲೇ ಬಿಟ್ಟು ಹೋಯ್ತು!" ಎಂದರು ಒಬ್ಬರು.

ಪ್ರಜ್ಞಾವಂತನು ತನ್ನ ಹೆಂಡತಿಯನ್ನು ಕರೆದುಕೊಂಡು ರಾಮೇಶ್ವರಕ್ಕೆ ಹೋಗಲು ನಿಶ್ಚಯಿಸಿದನು. ಒಳ್ಳೆಯ ಮುಹೂರ್ತ ನೋಡಿ ಇಬ್ಬರೂ ಹೊರಟರು. ಅವರು ಬಹಳ ದಿನ ಪ್ರಯಾಣ ಮಾಡಿ, ಒಂದು ದಿನ ಕುಂಭಕೋಣವನ್ನು ತಲಪಿ, ಒಂದು ಛತ್ರದಲ್ಲಿ ತಂಗಿದರು. ಆ ದಿನ ರಾತ್ರಿಯಲ್ಲಿ ಯಾರೋ ಕಳ್ಳರು ಬಂದು ಅವರ ಗಂಟು ಮೂಟೆಗಳನ್ನೆಲ್ಲಾ ಕದ್ದುಕೊಂಡು ಹೋಗಿ ಬಿಟ್ಟರು.

ಈ ಕಳ್ಳತನದಿಂದಾಗಿ ಪ್ರಜ್ಞಾವಂತನೂ ರಾಧೆಯೂ ಉಟ್ಟ ಬಟ್ಟೆಗಳೊಂದಿಗೆ ಉಳಿದರು. ಮುಂದಕ್ಕೆ ಪ್ರಯಾಣ ಮಾಡಲೂ ಹಿಂದಕ್ಕೆ ಹೋಗಲೂ ಸಾಧ್ಯವಿಲ್ಲದಂಥ ಪರಿಸ್ಥಿತಿ ಬಂತು.



ಅವರಿಗೆ ಬಂದ ದುಸ್ಥಿತಿಯನ್ನು ನೋಡಿ ಅಲ್ಲಿದ್ದವರು, "ನಡೆದು ಹೋದುದನ್ನು ನೆನೆದು ಮರುಗಿ ಏನು ಪ್ರಯೋಜನ ? ಈ ಊರಿನಲ್ಲಿ ದಾನಕರ್ಣ ನಂತಹ ವರ್ತಕನೊಬ್ಬನಿದ್ದಾನೆ. ಅವನದು ನಿಮ್ಮ ಪ್ರಾಂತವೇ ಅಂತೆ. ಅವನ ಹತ್ತಿರ ಹೋಗಿ ನಡೆದ ಸಂಗತಿ ಹೇಳಿ ಕೊಳ್ಳಿ. ನಿಮ್ಮ ಪ್ರಯಾಣಕ್ಕೆ ಅನುಕೂಲ ಮಾಡಿ ಕೊಡದಿರಲಿಕ್ಕಿಲ್ಲ. ಅಲ್ಲಿಗೆ ಹೋಗಿ" ಎಂದು ಆಲೋಚನೆ ಹೇಳಿದರು.

ಆ ವರ್ತಕನ ಮನೆ ಎಲ್ಲಿರುವುದೆಂದು ತಿಳಿದು ಕೊಂಡು, ಪ್ರಜ್ಞಾವಂತನು ಹೆಂಡತಿಯೊಂದಿಗೆ ಅಲ್ಲಿಗೆ ಹೋದನು. ಗಂಡನು ವರ್ತಕನೊಂದಿಗೆ ಮಾತಾಡುವ ಸಮಯದಲ್ಲಿ ರಾಧೆ ವರ್ತಕನ ಹೆಂಡತಿಯ ಬಳಿಗೆ ಹೋಗಿ, ತನ್ನ ಕಷ್ಟವನ್ನು ಅವಳ ಹತ್ತಿರ ಹೇಳ ತೊಡಗಿದಳು. ಸುಲೋಚನೆ ಎಂಬವಳು ಸತ್ತು ದೆವ್ವ ವಾಗಿ ತನ್ನನ್ನು ಹಿಡಿದಬಗೆ, ಹಡೆದ ಮಗುವಿನ ಮರಣ, ಆ ದೆವ್ವದ ನಿವಾರಣೆಗಾಗಿ ರಾಮೇಶ್ವರಕ್ಕೆ ಹೊರಟು, ಕಳ್ಳರಿಂದ ದೋಚಲ್ಪಟ್ಟು ಹೀಗೆ ಬಂದುದನ್ನೆಲ್ಲಾ ವಿವರಿಸಿದಳು ರಾಧೆ.

ಅದನ್ನೆಲ್ಲಾ ಕೇಳಿ ವರ್ತಕನ ಹೆಂಡತಿ ತನ್ನ ಶರೀರದ ಅಲಂಕಾರಗಳನ್ನೆಲ್ಲಾ ತೆಗೆದು, ಸಾಮಾನ್ಯ ಸೀರೆಯನ್ನು ಉಟ್ಟುಕೊಂಡು, ತನ್ನ ಗಂಡನೊಂದಿಗೆ ಮಾತಾಡಿ ಕೊಂಡಿರುವ ಪ್ರಜ್ಞಾವಂತನನ್ನು ತನ್ನ ಬಳಿಗೆ ಕರೆದು ಕೊಂಡು ಬರುವಂತೆ ಸೇವಕನನ್ನು ಕಳುಹಿಸಿದಳು. ಪ್ರಜ್ಞಾವಂತನು ಬಂದು ಅವಳನ್ನು ನೋಡದೆ, ತನ್ನ ಹೆಂಡತಿಯನ್ನು ನೋಡಿ ಅವಳ ಹತ್ತಿರ ನಿಂತನು.

"ಏನ್ರೀ ಪ್ರಜ್ಞಾವಂತರೇ, ನನ್ನನ್ನು ಎಲ್ಲಿ ಯಾದರೂ ನೋಡಿದ ನೆನಪು ನಿಮಗಿದೆಯೆ ?" ಎಂದು ಕೇಳಿದಳು ವರ್ತಕನ ಹೆಂಡತಿ.

ಪ್ರಜ್ಞಾವಂತನು ಅವಳನ್ನು ನೋಡಿ, ಸುಲೋಚನೆ ಎಂದು ಗುರುತಿಸಿ, ಏನೂ ತೋರದೆ ಬೊಂಬೆಯಂತೆ ನಿಂತನು.

ಸುಲೋಚನೆ ರಾಧೆಯ ಕಡೆಗೆ ನೋಡಿ, "ನೋಡಿದೆಯಾ ಅಮ್ಮಾ ? ನಾನು ಸತ್ತು ದೆವ್ವ ವಾಗಿ ನಿನ್ನನ್ನು ಹಿಡಿದಿದ್ದೇನೆಂಬ ಭ್ರಮೆಯಿಂದ ಏನೇನೋ ಮಾಡಿದಿರಿ. ದೆವ್ವವೆಂದರೆ ಭ್ರಮೆಯೆಂದು ಈಗಾದರೂ ಗೊತ್ತಾಯಿತಷ್ಟೆ ? ಇನ್ನು ಮೇಲೆ ದೆವ್ವದ ಯೋಚನೆ ಬಿಟ್ಟು ನಿಶ್ಚಿಂತೆಯಿಂದ ಮನೆಗೆ ಹೋಗಿ ಸುಖವಾಗಿರಿ" ಎಂದು ಆ ದಂಪತಿಗಳಿಗೆ ತನ್ನ ವೃತ್ತಾಂತವನ್ನೆಲ್ಲಾ ಹೇಳಿದಳು.

ಪ್ರಜ್ಞಾವಂತನೂ ರಾಧೆಯೂ ಎರಡು ದಿನಗಳ ವರೆಗೆ ಸುಲೋಚನೆಯ ಮನೆಯಲ್ಲಿ ಅತಿಥಿಗಳಾಗಿ ಇದ್ದು, ಅವರಿಂದ ಹಿಂದಿರುಗಿ ಪ್ರಯಾಣ ಮಾಡಲು ಹಣವನ್ನು ಪಡೆದುಕೊಂಡು, ತಮ್ಮ ಊರ ಕಡೆಗೆ ಹೊರಟರು.





# ದುರಾಶೆಯ ದುರ್ಗತಿ

ಒಂದು ಊರಿನಲ್ಲಿ ಜಾನಕಮ್ಮ ಎಂಬವಳು, ಬಾಗಿಲು ತೆರೆದು ಮನೆಯೊಳಗಿನಿಂದ ಹೊರಗೆ ಬಂದಳು. ಅಂಗಳದ ಬದಿಯಲ್ಲಿದ್ದ ಕರಿಬೇವಿನ ಎಲೆಗಳನ್ನು ಕಿತ್ತುಕೊಂಡು ಅವಳು ಮನೆಯೊಳಗೆ ಹಿಂದಿರುಗುವಾಗ ಓಡುತ್ತಾ ಬಂದ ಯಾವನೋ ಒಬ್ಬನು ಅವಳ ಹಿಂದೆಯೇ ಮನೆಯೊಳಗೆ ನುಗ್ಗಿ, ಬಾಗಿಲು ಮುಚ್ಚಿ ಅಗುಳಿ ಹಾಕಿದನು. ಕಳ್ಳನನ್ನು ನೋಡಿ ಜಾನಕಮ್ಮ ಕೂಗಲು ಬಾಯಿ ತೆರೆಯಲು, "ಕೂಗಿದರೆ ಸಾಯುವಿ. ನಾನು ನಿಮ್ಮ ಮನೆಗೆ ಕಳ್ಳತನಕ್ಕೆ ಬರಲಿಲ್ಲ. ಅಂಗಡಿ ಬೀದಿಯಲ್ಲಿ ಒಬ್ಬನ ಕೈಯಲ್ಲಿದ್ದ ಕಾಂಚಿಪಟ್ಟೆ ಸೀರೆಯನ್ನು ಎಳೆದು ಕೊಂಡು ಓಡಿದೆ. ಅವನು ನನ್ನ ಬೆನ್ನಟ್ಟುವಾಗ ತಪ್ಪಿಸಿಕೊಂಡು ಹೀಗೆ ಬಂದೆ. ಸ್ವಲ್ಪ ಹೊತ್ತಿದ್ದು ನನ್ನ ಪಾಡಿಗೆ ಹೋಗಿ ಬಿಡುತ್ತೇನೆ" ಎಂದ ಕಳ್ಳ.

ಕಾಂಚೀಪಟ್ಟೆ ಸೀರೆ ಅಂದ ಕೂಡಲೇ ಜಾನಕಮ್ಮನಿಗೆ ಹೊಟ್ಟೆಯಿಂದುಕ್ಕಿದ ಕುತೂಹಲವು ಬಾಯಿಗೆ ಬಂದು "ಎಲ್ಲೀ ? ಸೀರೆ ತೋರಿಸು ನೋಡುವಾ !" ಎಂದಳು, ಕಳ್ಳ ತನ್ನ ಚೀಲದಲ್ಲಿದ್ದ ಪಟ್ಟೇ ಸೀರೆಯನ್ನು ಎತ್ತಿ ಸ್ವಲ್ಪ ಮಾತ್ರ ಬಿಡಿಸಿ ತೋರಿಸಿ, ಮತ್ತೆ ಚೀಲಕ್ಕೆ ಹಾಕಿಕೊಂಡನು.

"ಇಂತಹುದೊಂದು ಪಟ್ಟೇ ಸೀರೆ ತಂದುಕೊಡೀ ಅಂತ ನಮ್ಮವರ ಹತ್ತಿರ ಬಹಳ ಕಾಲದಿಂದ ಕೇಳುತ್ತಾ ಇದ್ದೆ, ಅವರು ತರೋದೇ ಇಲ್ಲ, ನಿನ್ನೆ ಈ ವಿಷಯ ದಲ್ಲಿ ಅವರ ಹತ್ರ ತಗಾದೆ ಕೂಡಾ ಮಾಡಿದೆ. ಕಾಂಚೀಪಟ್ಟೇ ಸೀರೆ ಎಂದರೆ ಸುಲಭವೇ ? ಅಷ್ಟು ಹಣ ಎಲ್ಲಿಂದ ತರಲಿ ಅನ್ನುತ್ತಾರೆ. ನೀನಂತೂ ಈ ಸೀರೇನ ಹಣಕೊಟ್ಟು ಕೊಂಡುಕೊಳ್ಳಲಿಲ್ಲ. ನನಗೇ ಮಾರಿಬಿಡು. ಕಳ್ಳ ಸೊತ್ತಿಗೆ ಬೆಲೆಯೇನಿದೆ ? ಇನ್ನೂರು ರೂಪಾಯಿ ಕೊಡುತ್ತೇನೆ. ಅದನ್ನು ತೆಗೆದುಕೊಂಡು, ಸೀರೆ ನನಗೆ ಕೊಟ್ಟು ಹೋಗಿಬಿಡು. ಆಮೇಲೆ ಯಾರೂ ನಿನ್ನನ್ನು ಬೆನ್ನು ಹಿಡಿಯುವರೆಂಬ ಭಯವೇ ಇರುವುದಿಲ್ಲ. ಏನನ್ನುವಿ ?" ಎಂದು ಕೇಳಿದಳು ಜಾನಕಮ್ಮ.

"ಸರಿ. ಹಣ ತಂದುಕೊಡಿ" ಎಂದ ಕಳ್ಳ. ಅಷ್ಟರಲ್ಲಿ ಯಾರೋ ಬಾಗಿಲು ತಟ್ಟಿದ ಶಬ್ದ ಕೇಳ ತೊಡಗಿತು. ಕಳ್ಳ ಕೂಡಲೇ ಚೀಲದೊಂದಿಗೆ ಅಟ್ಟದ ಮೇಲೇರಿ ಕುಳಿತ.

ಶರತ್

ಜಾನಕಮ್ಮ ಹೋಗಿ ಬಾಗಿಲು ತೆರೆದಳು. ರಕ್ಷಕ ಭಟರು ಹೊರಗೆ ನಿಂತಿದ್ದರು. "ಅಮ್ಮಾ, ಒಬ್ಬ ಕಳ್ಳ ಬೀದಿಯಲ್ಲಿ ಯಾರ ಕೈಯಿಂದಲೋ ಒಂದು ಸೀರೆ ಕದ್ದುಕೊಂಡು ಈ ಬೀದಿಯಲ್ಲೇ ಓಡಿ ಬಂದ. ಯಾರಾದರೂ ಓಡೋದನ್ನು ನೋಡಿದಿರಾ ? ಯಾವ ಕಡೆಗೆ ಓಡಿದನೆಂದು ಗೊತ್ತೇ ?" ಎಂದು ರಕ್ಷಕ ಭಟರು ಕೇಳಿದರು,

ಜಾನಕಮ್ಮನ ಮನಸ್ಸು ಬಲು ತೀವ್ರವಾಗಿ ಆಲೋಚಿಸಿತು. ಕಳ್ಳನನ್ನು ಈ ಭಟರಿಗೆ ಹಿಡಿದು ಕೊಟ್ಟರೆ ತನಗೇನು ಸಿಗುತ್ತೆ ? ಸಾವಿರ ರೂಪಾಯಿಯ ಸೀರೆಯನ್ನು ಕಳ್ಳನು ಇನ್ನೂರು ರೂಪಾಯಿಗೇ ತನಗೆ ಕೊಡುವೆನೆಂದು ಹೇಳಿದ್ದಾನೆ, ಹೀಗೆಂದು ಕೊಂಡು ಅವಳು "ಇತ್ತಕಡೆ ಯಾರೂ ಬರಲಿಲ್ಲ ವಯ್ಯಾ !" ಎಂದಳು. ರಕ್ಷಕ ಭಟರು ಹೊರಟು ಹೋದರು.

ಜಾನಕಮ್ಮ ಒಳಗೆ ಹೋಗಿ ಕಳ್ಳನನ್ನು ಇಳಿದು ಬರುವಂತೆ ಕರೆದು ತಾನು ಭದ್ರಪಡಿಸಿಕೊಂಡಿದ್ದ ಇನ್ನೂರು ರೂಪಾಯಿಯನ್ನು ಅವನಿಗೆ ಕೊಟ್ಟು ಸೀರೆ ಕೊಡುವಂತೆ ಕೇಳಿದಳು. ಕಳ್ಳ ಅವಳು ಕೊಟ್ಟ ಹಣವನ್ನು ಚೀಲದೊಳಗೆ ಹಾಕಿಕೊಂಡು, ಜಾನಕಮ್ಮ ನನ್ನು ಫಕ್ಕನೆ ದೂಡಿ, ಹೊರಗೆ ಓಡಿ ಹೋಗಿ ಮಾಯವಾದನು.

ಹಠಾತ್ತಾಗಿ ನಡೆದ ಈ ಘಟನೆಯಿಂದ ಜಾನಕಮ್ಮ ಬೆರಗು ಬಡಿದವಳಾಗಿ ತನ್ನನ್ನೇ ಹಳಿದುಕೊಳ್ಳ ತೊಡಗಿದಳು. ಕಳ್ಳ ಸೊತ್ತಿನ ಮೇಲೆ ಆಸೆಪಟ್ಟಿದ್ದಕ್ಕೂ ಕಳ್ಳನನ್ನು ಕಾಪಾಡಿದುದಕ್ಕೂ ತನಗೆ ತಕ್ಕ ಶಿಕ್ಷೆ ಆಯಿತೆಂದು ಹಣೆ ಚಚ್ಚಿಕೊಂಡಳು.

ಅಷ್ಟರಲ್ಲಿ ಅವಳ ಗಂಡ ವೆಂಕಟಾದ್ರಿ ಮನೆಗೆ ಬಂದು ಬೇಸರದಿಂದ ಹೀಗೆ ಹೇಳಿದನು :

"ಛೇ ಛೇ ! ನೀನು ಎಂಥಾ ದುರದೃಷ್ಟವಂತಳು ಅಂತ ಇವತ್ತು ಗೊತ್ತಾಯಿತಪ್ಪ. ಕಾಂಚಿ ಪಟ್ಟೆ ಸೀರೇ ಅಂತಾ ದಿನಾ ಕಿರಿಕಿರಿ ಮಾಡುವಿಯಲ್ಲಾ ಅಂತ, ಇವತ್ತು ಒಬ್ಬ ಸ್ನೇಹಿತನ ಕೈಯಿಂದ ಸಾವಿರ ರೂಪಾಯಿ ಸಾಲ ತೆಗೆದುಕೊಂಡು ಕಾಂಚಿಪಟ್ಟೇ ಸೀರೆ ಕೊಂಡುಕೊಂಡೆ. ಅಂಗಡಿಯಿಂದ ಬೀದಿಗೆ ಇಳಿದ ಕೂಡಲೇ ಯಾವನೋ ಭಂಡಕಳ್ಳ ಅದನ್ನು ಎಳೆದುಕೊಂಡು ಓಡಿದ. ನಾನು ಅವನನ್ನು ಓಡಿಸಿ ಕೊಂಡು ಓಡಿದೆ. ಅವನ ಹಾಗೆ ನಾನೆಲ್ಲಿ ಓಡಿಯೇನು ? ತಪ್ಪಿಸಿಕೊಂಡ ! ನಾನು ಓಡಿಹೋಗಿ ರಕ್ಷಕ ಭಟರಿಗೆ ಫಿರ್ಯಾದಿ ಮಾಡಿದೆ. ಏನೋ ! ಇನ್ನೆಲ್ಲಿ ಸಿಗುತ್ತಾನೆ ಆ ಕಳ್ಳ ! ನಿನಗೆಲ್ಲಿದೆ ಅಂಥ ಸೀರೆಯ ಯೋಗ !"

ಇದನ್ನು ಕೇಳುವಾಗ ತನಗೆ ಬಿದ್ದ ಶಿಕ್ಷೆಯ ಪೂರ್ತಿ ಸ್ವರೂಪ ಎಂತಹುದೆಂದು ಜಾನಕಮ್ಮನಿಗೆ ಗೊತ್ತಾಯಿತು.






ಒಂದಾನೊಂದುದಿನ ತ್ರಿಲೋಕಸಂಚಾರಿಯಾದ ನಾರದನು ಯಾವುದಕ್ಕೋ ಕೈಲಾಸದ ಕಡೆಗೆ ಹೋಗುತ್ತಿದ್ದನು. ಆಗ ಕಂಟಕಮುಖಿ ಎಂಬ ಯಕ್ಷಿಣಿ ಅವನಿಗೆ ಇದಿರಾಗಿ ಬಂದು ಮಂದಹಾಸ ದಿಂದ, "ಹೀಗೆ ಒಂದೇ ಸಮನೆ ತಿರುಗಾಡುವುದ ರಲ್ಲಿ ಏನು ಸುಖವಿದೆ ? ನನ್ನನ್ನು ಮದುವೆಯಾಗಿ ಬಿಡು, ನಾರದ ಮಹಾಶಯಾ !" ಎಂದು ಕೇಳಿಕೊಂಡಳು.

"ನಾನು ಕಲಹಭೋಜನನೆಂದು ನಿನಗೆ ಗೊತ್ತಿದೆ ತಾನೇ ? ಕಲಹದ ಅಡಿಗೇ ಮಾಡಿಬಡಿಸುವವಳು ಸಿಗಬೇಕಷ್ಟೆ ? ಅಂಥವಳೆಲ್ಲಿದ್ದಾಳೋ ಏನೋ ?" ಎಂದನು ನಾರದ.

"ನನ್ನನ್ನು ಏನೆಂದುಕೊಂಡೆ ? ನಿನಗಿಂತಲೂ ದೊಡ್ಡ ಜಗಳಗಂಟಿ ನಾನು. ಬೇಕಾದರೆ ಈಗಲೇ ತೋರಿಸುತ್ತೇನೆ, ಸ್ವಲ್ಪ ಹೊತ್ತು ಇಲ್ಲಿಯೇ ನೋಡ್ತಾ ಇರು. ಪ್ರತ್ಯಕ್ಷವಾಗಿ ನಿರೂಪಿಸುತ್ತೇನೆ" ಎಂದಳು ಯಕ್ಷಿಣಿ.

ಆ ಸಮಯದಲ್ಲಿ ವಿಘ್ನೇಶ್ವರನೂ, ಕುಮಾರ ಸ್ವಾಮಿಯೂ ಕೈಕೈ ಹಿಡಿದುಕೊಂಡು ಮಾತಾಡುತ್ತಾ ಉತ್ಸಾಹದಿಂದ ಬರುತ್ತಿದ್ದರು. ನಾರದನು ಅವರನ್ನು ಯಕ್ಷಿಣಿಗೆ ತೋರಿಸುತ್ತ "ಅಕೋ ಅಲ್ಲಿ ನೋಡು. ಆ ಅಣ್ಣ ತಮ್ಮಂದಿರ ನಡುವೆ ಜಗಳ ಹುಟ್ಟಿಸು ನೋಡುವಾ. ಅಷ್ಟು ಮಾಡಿದರೆ ಸಾಕು, ಬೇರೇನೂ ಬೇಡ." ಎಂದನು.

"ಓ ! ಈ ಕ್ಷಣದಲ್ಲೇ !" ಎಂದು ಕಂಟಕಮುಖಿ, ಪಕ್ಕದಲ್ಲಿದ್ದ ಸರೋವರದಲ್ಲಿ ಧುಮುಕಿ ಬಂಗಾರದ ಕಮಲಪುಷ್ಪವಾಗಿ ಮಾರ್ಪಟ್ಟಳು. ಆ ಹೂವಿನ ಕಡೆಯಿಂದ "ಪಾರ್ವತೀ ಪರಮೇಶ್ವರರ ಸುಪುತ್ರರಿ ಗಾಗಿಯೇ ಅರಳಿರುವ ನಾನು ! ಬೇರೆ ಯಾರೂ ನನ್ನನ್ನು ಮುಟ್ಟಲು ಅರ್ಹರಲ್ಲ." ಎಂದು ಸಣ್ಣನೆಯ ರಾಗವೂ ಇಂಪಾಗಿ ಹೊರಟಿತು.

ವಿಘ್ನೇಶ್ವರನೂ ಕುಮಾರಸ್ವಾಮಿಯೂ ಗಬಗಬನೆ ಸರೋವರಕ್ಕಿಳಿದು ಆ ಹೂವನ್ನು ಹಿಡಿದು ನನ್ನದು, ತನ್ನದೆಂದು ವಾದ ಮಾಡುತ್ತ, "ನೀನೊಬ್ಬ ಅಮ್ಮ

೭. ಸಾವಿರ ವಿಘ್ನಗಳು




ಮಾಡಿದ ಬೊಂಬೆ! ಕೊಳೆ ಮುದ್ದೆ!" ಎಂದು ಕುಮಾರಸ್ವಾಮಿ ವಿಘ್ನೇಶ್ವರನನ್ನೂ, "ನೀನು ಕೊಳಕು ಕುಂಟೆ ಶರವಣದಲ್ಲಿ ಹುಟ್ಟಿದ ಕೊಳಕ!" ಎಂದು ವಿಘ್ನೇಶ್ವರನು ಕುಮಾರಸ್ವಾಮಿಯನ್ನೂ ಹಳಿದುಕೊಳ್ಳ ತೊಡಗಿದರು. ಮಾತಿಗೆ ಮಾತಾಗಿ ವಾದ ವಿವಾದ ಕೈಗಳಿಗೆ ಹರಡಿತು,

ಕುಮಾರಸ್ವಾಮಿ ಮುಷ್ಟಿ ಬಿಗಿದು ವಿಘ್ನೇಶ್ವರನನ್ನು ತಿವಿಯಲು ನೋಡಿದನು. ವಿಘ್ನೇಶ್ವರನು ತನ್ನ ಸೊಂಡಿಲಿನಿಂದ ಅವನ ಮಣಿ ಗಂಟನ್ನು ಬಿಗಿ ಹಿಡಿದನು. ಇಬ್ಬರೂ ಒಬ್ಬರನ್ನೊಬ್ಬರು ದೂಡಾಡಿಕೊಂಡರು. ವಿಘ್ನೇಶ್ವರನು ಕುಮಾರಸ್ವಾಮಿಯ ಸೊಂಟವನ್ನು ಸೊಂಡಿಲಿನಿಂದ ಬಿಗಿ ಹಿಡಿದು ಮೇಲೆತ್ತಿದನು. ಕುಮಾರಸ್ವಾಮಿ ಮೇಲಿನಿಂದ ಶೂಲವನ್ನು ವಿನಾಯಕನ ಲಂಬೋದರಕ್ಕೆ ಗುರಿ ಹಿಡಿದನು.

ನಾರದನು ಓಡುತ್ತಾ ಬಂದು ಅವರ ಕಲಹವನ್ನು ನಿವಾರಿಸಿ, "ಇದೇನೂ ಒಳ್ಳೇ ಜಗಳವಲ್ಲ. ಇದರ ಬದಲಿಗೆ ಇಬ್ಬರೊಳಗೆ ಏನಾದರೂ ಪಂಥ ಕಟ್ಟಿಕೊಳ್ಳಿ" ಎಂದನು.

ನಾರದನ ಮಾತಿಗೆ ಗೌರವವಿತ್ತು ಅಣ್ಣ ತಮ್ಮಂದಿರಿಬ್ಬರೂ ದೂರ ದೂರ ನಿಂತರು. ಕುಮಾರಸ್ವಾಮಿ ತುಸು ಆಲೋಚಿಸಿ, "ಹಾಗಾದರೆ ಯಾರು ವಿಶ್ವಪ್ರದಕ್ಷಿಣೆಯನ್ನು ಮೊದಲು ಮಾಡಿ ಬರುವರೋ ಅವರಿಗೇ ಈ ಸ್ವರ್ಣಕಮಲ" ಎಂದನು.

"ಚೆನ್ನಾಗಿದೆ! ಚೆನ್ನಾಗಿದೆ!" ಎಂದನು ನಾರದ. "ಇದೋ ನಾನು ಹೊರಟೆನು" ಎಂದವನೇ ಕುಮಾರಸ್ವಾಮಿ ತನ್ನ ನವಿಲಿನ ಮೇಲೇರಿ ವಿಶ್ವಪ್ರದಕ್ಷಿಣೆ ಮಾಡಲು ಆಕಾಶಮಾರ್ಗದಲ್ಲಿ ಹೊರಟನು.

ವಿಘ್ನೇಶ್ವರನು ಬೆಪ್ಪುಬಡೆದಂತೆ ನಿಟ್ಟುಸಿರುಬಿಟ್ಟು ಸುಮ್ಮನಿರುವುದನ್ನು ನೋಡಿ ನಾರದನು, "ಏನಿದು ವಿಘ್ನೇಶ್ವರಾ! ಪಂಥ ಕಟ್ಟಿಕೊಂಡು ಹೀಗೆ ಸುಮ್ಮನಿರುವೆಯಲ್ಲಾ!" ಎಂದನು.

"ಹೋಗಲಿ ಬಿಡಯ್ಯಾ. ಯಾರಿಗೆ ಎಷ್ಟು ಪ್ರಾಪ್ತಿಯೋ ಅಷ್ಟೇ ಸಿಗುತ್ತೆ. ಸ್ವರ್ಣಕಮಲ ನನಗೇ ಬೇಕೆಂದರೆ ಬಂದುಬಿಡುತ್ತೇನು? ನಾನು ಈ ಬೊಜ್ಜುಹೊಟ್ಟೆ ಹೊತ್ತುಕೊಂಡು ಪುಟ್ಟಿಲಿಯ ಮೇಲೆ ವಿಶ್ವಪ್ರದಕ್ಷಿಣೆ ಏನು ಮಾಡೇನು? ತಮ್ಮನೇ ತೆಗೆದುಕೊಳ್ಳಲಿ ಕಮಲವನ್ನು! ಪಾಪ! ಎಷ್ಟಾದರೂ ಚಿಕ್ಕವನು." ಎಂದನು.

"ಅಯ್ಯಾ ವಿಘ್ನಪತೀ! ವಿಶ್ವ ಜನನೀಜನಕರಾದ ಪಾರ್ವತೀ ಪರಮೇಶ್ವರರನ್ನು ದರ್ಶಿಸಬೇಕೆಂದು ಬಂದೆನು. ನಿನ್ನಿಷ್ಟ. ಆಮೇಲೆ ಬರುತ್ತೇನೆ" ಎಂದು ಹೇಳಿ ನಾರದನು ಹೊರಟುಹೋದನು.

ವಿಘ್ನೇಶ್ವರನು ತಟಕ್ಕನೆ ಎದ್ದು ಗುಡುಗುಡು ಓಡುತ್ತಾ ಹೋಗಿ, ಒಂದು ದಿಣ್ಣೆಯ ಮೇಲೆ ಒಟ್ಟಾಗಿ ಕುಳಿತಿದ್ದ ಪಾರ್ವತೀ ಪರಮೇಶ್ವರರಿಗೆ ಮೂರು ಪ್ರದಕ್ಷಿಣೆ ಮಾಡಿ ಬದಿಯಲ್ಲಿ ತಮ್ಮನು ಬರುವುದನ್ನೇ ಕಾದು ನಿಂತನು.



ಬಹಳ ಹೊತ್ತಿನ ಮೇಲೆ ಆಯಾಸದಿಂದ ಉಸಿರುಬಿಡುತ್ತ ವಿಶ್ವಪ್ರದಕ್ಷಿಣೆ ಮುಗಿಸಿ ಕುಮಾರ ಸ್ವಾಮಿ ನವಿಲು ವಾಹನದಿಂದ ಇಳಿದನು. ವಿಘ್ನೇಶ್ವರನು ತಮ್ಮನನ್ನು ಆಲಿಂಗಿಸಿಕೊಂಡು, "ತಮ್ಮಾ! ಪಾಪ! ಬಹಳ ಕಷ್ಟಪಟ್ಟು ವಿಶ್ವವನ್ನು ಸುತ್ತಿ ಬಂದಿರುವಿ. ಸ್ವರ್ಣ ಕಮಲವನ್ನು ನೀನೇ ತೆಗೆದುಕೋಪ್ಪ. ಪಂದ್ಯದಲ್ಲಿ ನಾನೇ ಗೆದ್ದವನಾದರೂ ನನಗೆ ಹೂವೇನೂ ಬೇಡ ಬಿಡು" ಎಂದನು.

ಕುಮಾರಸ್ವಾಮಿ ಬೆರಗಾಗಿ "ಅದು ಹೇಗೆ?" ಎಂದು ಕಣ್ಣರಳಿಸಿ ಕೇಳಿದನು.

"ನಿನಗಿಂತ ಮೊದಲು ನಾನೇ ಒಂದಲ್ಲ, ಮೂರು ಸಾರಿ ವಿಶ್ವಪ್ರದಕ್ಷಿಣೆ ಮಾಡಿದ್ದೇನೆ. ಸುಳ್ಳೋ ಸತ್ಯವೋ ಯಾರನ್ನು ಬೇಕಾದರೂ ಕೇಳು!" ಎಂದನು ವಿಘ್ನೇಶ್ವರ.

"ನಿಜ! ವಿಘ್ನೇಶ್ವರನೇ ಗೆದ್ದವನು!" ಎಂದು ನಾಲ್ಕು ಮೂಲೆಗಳಿಂದಲೂ ಧ್ವನಿ ಕೇಳಿಸಿತು.

ಕುಮಾರಸ್ವಾಮಿ ನಿಜವನ್ನು ತಿಳಿದುಕೊಂಡು, ವಿಘ್ನೇಶ್ವರನ ಮುಂದೆ ಮೊಣಕಾಲೂರಿ ವಂದಿಸಿ, "ಅಣ್ಣಾ, ನಾನು ದೊಡ್ಡ ತಪಸ್ಸುಮಾಡಿ ಬ್ರಹ್ಮ ಜ್ಞಾನ ಹೊಂದಿದೆನೇ ಹೊರತು ಸಣ್ಣ ವಿಷಯದಲ್ಲಿ ಅಜ್ಞಾನಿಯೇ ಸರಿ. ನೀನು ಕುಶಾಗ್ರಬುದ್ಧಿಯುವನು. ನಿನ್ನ ಮುಂದೆ ನಾನೆಲ್ಲಿ? ಎಷ್ಟಾದರೂ ನಾನು ನಿನ್ನ ತರುವಾಯದವನು ತಾನೇ? ಈ ಸಂಗತಿ ಹೋಗಲಿ. ನನ್ನ ದುಡುಕನ್ನು ಕ್ಷಮಿಸಿಬಿಡು. ನಾನೀಗ ತಾರಕಾಸುರನ ಮೇಲೆ ಯುದ್ಧಕ್ಕೆ ಹೊರಡುತ್ತೇನೆ. ನನ್ನನ್ನು ಆಶೀರ್ವದಿಸು ಅಣ್ಣಾ!" ಎಂದನು.

ವಿಘ್ನೇಶ್ವರನು ಕುಮಾರಸ್ವಾಮಿಯ ಭುಜ ಹಿಡಿದೆತ್ತಿ, "ತಮ್ಮಾ, ನಾನು ದೊಡ್ಡವನೆಂದೂ ನೀನು ಚಿಕ್ಕವನೆಂದೂ ಭಾವಿಸಿಕೊಳ್ಳಬೇಡ. ನೀನು ಹೇಳಿದಹಾಗೆ ಅಮ್ಮ ಮಾಡಿದ ಒಂದು ಆಟದ ಬೊಂಬೆಯೇ ನಾನು. ನಿನಗಾಗಿಯೇ ಪಾರ್ವತೀ ಪರಮೇಶ್ವರರಿಗೆ ಮದುವೆಯಾಗಿದೆ. ಅವರ ಅನುರಾಗದ ಫಲವೇ ನೀನು. ನಿನ್ನ ವಿಜಯವು ಎಂದೋ ಬರೆದಿಟ್ಟ ಮಾತು. ತಾರಕಾಸುರನು ನಿನ್ನಿಂದಲೇ ಸಾಯಬೇಕೆಂದು ವರ ಪಡೆದಿದ್ದಾನೆ. ಸುಬ್ರಹ್ಮಣ್ಯೇಶ್ವರನು ನೀನು. ನನಗೆ ಎಲ್ಲಾ ಕಡೆಯಲ್ಲಿಯೂ ಒಂದು ಸಾಧಾರಣ ಗುಡಿ ಇದ್ದರೆ, ನೀನಿರುವ ಆಲಯ ಪ್ರಾಂತವು ದೊಡ್ಡ ಪುಣ್ಯಕ್ಷೇತ್ರ ವಾಗುತ್ತದೆ. ದೊಡ್ಡ ಗೋಪುರವಿರುವ ಆಲಯ ಗಳಲ್ಲಿ ನೀನು ಎಲ್ಲ ದೇವತೆಗಳಿಗಿಂತಲೂ ಪ್ರಥಮ ಪೂಜೆ ಪಡೆಯುವ ಪ್ರಮುಖ ದೈವಮೂರ್ತಿಯಾಗಿ ಆರಾಧಿಸಲ್ಪಡುವಿಯಪ್ಪಾ. ಶೀಘ್ರವಾಗಿ ಹೋಗಿ ತಾರಕಾಸುರನ ಉಪದ್ರಗಳನ್ನು ನಿಲ್ಲಿಸಿಬಿಡು." ಎಂದನು.

ಕುಮಾರಸ್ವಾಮಿ ದೇವ ಸೇನಾಧಿಪತಿಯಾಗಿ ತಾರಕಾಸುರನ ಮೇಲೆ ಯುದ್ಧಕ್ಕೆ ಹೊರಟನು.




ಇಷ್ಟರಲ್ಲಿ ಯಕ್ಷರ ಅಧಿಪತಿಯಾದ ಕುಬೇರನಿಗೆ ಕಂಕಟಮುಖಿ ಮಾಡಿದ ಜಗಳಗಂಟಿತನವು ಗೊತ್ತಾಯಿತು. ಅವನು ಕಂಟಕಮುಖಿಯನ್ನು ಹಿಡಿ ತರಿಸಿ, "ಎಲೇ ಪಾಪಿಷ್ಠಳೇ ! ಮಾಯಾದಮಾರೀ ! ಶಿವಕುಮಾರರೊಳಗೆ ಕಲಹ ತರುವಷ್ಟು ನಿನ್ನ ಹಾರಾಟವಾಯಿತೇನೇ ? ಕಂಟಕೀಲತೆಯಾಗಿ ಭೂಮಿಯಲ್ಲಿ ಬಿದ್ದಿರು" ಎಂದು ಅವಳನ್ನು ಶಪಿಸಿ ದೂಡಿಸಿದನು.

ಕಂಟಕಮುಖಿ ತಪ್ಪು ಕ್ಷಮಿಸಬೇಕೆಂದು ಹೊರಳಿ ಹೊರಳಿ ಬೇಡಿಕೊಂಡಳು. ಆಗ ಕುಬೇರನು, "ವಿಘ್ನೇಶ್ವರನ ಅನುಗ್ರಹದಿಂದ ನಿನ್ನ ಶಾಪ ತೊಲಗುತ್ತದೆ" ಎಂದನು.

ಕಂಟಕಮುಖಿ ಮುಳ್ಳಿನ ಹಾಸು ಬಳ್ಳಿಯಾಗಿ ಭೂಮಿಯಲ್ಲಿ ಮೊಳೆತಳು.

ಅತ್ತ ಕುಮಾರಸ್ವಾಮಿ ದೇವತೆಗಳಿಗೆ ಸೇನಾ ನಾಯಕನಾಗಿ ಯುದ್ಧ ಮಾಡಿ ತಾರಕಾಸುರನನ್ನು ನಿರ್ಮೂಲ ಮಾಡಿದನು. ದೇವೇಂದ್ರನು ಅವನಿಗೆ ತನ್ನ ಕುಮಾರಿಯಾದ ದೇವಯಾನೆಯನ್ನು ಕೊಟ್ಟು ವಿವಾಹ ನಡೆಸಲು ಎಲ್ಲಾ ಏರ್ಪಾಡುಗಳನ್ನೂ ಮಾಡಲು ತೊಡಗಿದನು. ಆಗ "ಅಣ್ಣನಿಗಾಗದೆ ತಮ್ಮನ ಮದುವೆಯೆ ?" ಎಂಬ ಪ್ರಶ್ನೆಯೊಂದು ಹೊರಟಿತು. ಅದರಿಂದ ಆ ಮದುವೆ ನಿಂತಿತು.

ಆಗ ಪಾರ್ವತಿ ವಿಘ್ನೇಶ್ವರನನ್ನು ನೋಡಿ, "ಪ್ರಿಯ ಕಂದಾ ! ನಿನ್ನ ತಮ್ಮನಿಗೆ ಮದುವೆಯಾಗ ಬೇಕಾದರೆ ನೀನು ಮದುವೆ ಮಾಡಿಕೊಳ್ಳಬೇಕು. ಅದು ನಿನ್ನ ಧರ್ಮ ಕೂಡಾ" ಎಂದಳು.

"ಇಂತಹ ಅರ್ಥವಿಲ್ಲದ ನಿಯಮಗಳೆಲ್ಲ ಏತಕ್ಕೆ ಅಮ್ಮಾ ? ಯಾರ ಇಷ್ಟಾನುಸಾರ ಅವರು ಮದುವೆಯಾಗುವುದು ಬಿಟ್ಟು, ಬಾಲ ಮುರಿದ ನರಿಯ ಹಾಗೆ, ನನ್ನಂಥ ಏಕದಂತನನ್ನು ಕೂಡಾ ಕಾಂತಾಮಣಿಯರ ಕೊರಳಿಗೆ ಕಟ್ಟುವುದೇನೂ ಚೆನ್ನಾಗಿಲ್ಲ ಅಮ್ಮಾ !" ಎಂದು ವಿಘ್ನೇಶ್ವರನು ಮೊದಲನೇ ವಿಘ್ನವೊಡ್ಡಿದನು.

ಹೀಗೆ ಅವನು ತನ್ನ ಮದುವೆಗೆ ಸೊಂಡಿಲು, ಹೊಟ್ಟೆ, ಕಿವಿ ಮುಂತಾದ ನೆಪಗಳನ್ನು ಹೇಳುತ್ತಾ, ಎಷ್ಟೋ ವಿಘ್ನಗಳನ್ನು ಒಡ್ಡುತ್ತಾ ಬಂದನು, ಒಂದುಸಾರಿ ಪಾರ್ವತಿ ಈಸಾರಿ ಮದುವೆಯಾಗಲೇ ಬೇಕೆಂದು ಹಟ ಹಿಡಿದು ಹೇಳಿದಳು.

"ಇಲ್ಲಮ್ಮಾ ನನ್ನದೊಂದು ಕೆಲಸ ಉಳಿದಿದೆ. ನಾನು ತಪಸ್ಸೇ ಮಾಡಲಿಲ್ಲ. ತಮ್ಮನು ತಪಸ್ಸು ಮಾಡಿದ್ದಾನೆ. ಅಣ್ಣನಾದ ನಾನು ತಪಸ್ಸು ಮುಗಿಸಿ ಬರುತ್ತೇನೆ" ಎಂದು ಅಭ್ಯಂತರ ಹೇಳಿ ವಿಘ್ನೇಶ್ವರನು ತಪಸ್ಸಿಗೆ ಹೋದನು.

ಅವನ ತಪಸ್ಸನ್ನು ನೋಡಿ ಇಂದ್ರನು ಹೆದರಿ ವಿಘ್ನೇಶ್ವರನ ತಪಸ್ಸನ್ನು ಕೆಡಿಸಲು ಅನೇಕಮಂದಿ ಅಪ್ಸರಸಿಯರನ್ನು ನಿಯಮಿಸಿದನು. ಅರ್ಕಳೆಂಬ ಅಪ್ಸರೆ ತನ್ನಿಂದಾಗದೆಂದು ನಿರಾಕರಿಸಿದಳು.

"ಹೊಲೆಕಾಗೆಯುವಳೇ ! ನೀನು ಮುಟ್ಟಲಾಗದ ಎಕ್ಕೆಗಿಡವಾಗಿ ಭೂಮಿಯಲ್ಲಿ ಮೊಳೆತುಕೊಂಡಿರು !" ಎಂದು ಶಪಿಸಿದನು ಇಂದ್ರ.

ವಿಘ್ನೇಶ್ವರನು ತಪಸ್ಸಿಗೆ ಅನುಕೂಲವಾದ ಸ್ಥಳದಲ್ಲಿ ಕುಳಿತು ಧ್ಯಾನಮಗ್ನನಾಗಿದ್ದನು. ಅವನ ಸುತ್ತಲೂ ಮುಳ್ಳು ತುಂಬಿದ ಹಾಸುಬಳ್ಳಿ ಹೂವುಗಳೂ ಇದ್ದವು. ಅಪ್ಸರಸಿಯುರು ಅಲ್ಲಿಗೆ ಬಂದು ನಾಟ್ಯವಾಡಲು ಪ್ರಯತ್ನಿಸಿದರು. ಅವರ ಕಾಲಿಗೆ ಮುಳ್ಳುಗಳು ಚುಚ್ಚುವುದರಿಂದ "ಹಾಯ್, ಹೂಯ್" ಎಂದು ಆರ್ತನಾದ ಮಾಡುತ್ತ ಅಡ್ಡಾದಿಡ್ಡಿಯಾಗಿ ಕುಪ್ಪಳಿಸ ತೊಡಗಿದರು. ಅಪ್ಸರಸಿಯರ ಭಯ ಆರ್ತನಾದಗಳಿಂದ ವಿಘ್ನೇಶ್ವರನಿಗೆ ಧ್ಯಾನಭಂಗವಾಗಿ ತನ್ನ ತಪಸ್ಸನ್ನು ಕೆಡಿಸಿದವರ ಮೇಲೆ ಅಭಿಮಾನ ಉಂಟಾಯಿತು. ಅಪ್ಸರಸಿಯುರು ಭಯಪಡುತ್ತ ಬಿದ್ದೇಳುತ್ತ ಕುಂಟುತ್ತ ಓಡಿಹೋಗಿ ಬಿಟ್ಟರು. ಅಲ್ಲಿ ಹಾಸು ಮುಳ್ಳಾಗಿ ಬೆಳೆದ ಯಕ್ಷಿಣಿ ಕಂಟಕಮುಖಿ, ನಿಜರೂಪದಿಂದೆದ್ದು "ಸ್ವಾಮೀ ! ನೀವಿಬ್ಬರು ಅಣ್ಣ ತಮ್ಮಂದಿರೊಳಗೆ ಕಲಹ ತಂದು ಕುಬೇರನ ಶಾಪದಿಂದ ಹೀಗೆ ಬಿದ್ದಿದ್ದೇನೆ. ನನ್ನ ಮೇಲೆ ಅನುಗ್ರಹಿಸಬೇಕು" ಎಂದು ಅಡ್ಡಬಿದ್ದು ಬೇಡಿಕೊಂಡಳು.

ಆದಿನ ಸರಿಯಾಗಿ ಭಾದ್ರಪದ ಶುಕ್ಲ ಚತುರ್ಥಿ. ವಿನಾಯಕಚೌತಿಯು ದಿನವೇ ಅದು. ವಿಘ್ನೇಶ್ವರನು ಕಂಟಕಮುಖಿಯು ಶಾಪವನ್ನು ತೊಲಗಿಸಿ, ವಿನಾಯಕ ಚೌತಿಯು ದಿನ ನಿನ್ನ ಮುಳ್ಳು ಕಾಯಿಗಳನ್ನು ಎಲ್ಲರೂ ಸ್ಮರಿಸಿಕೊಳ್ಳುವಂತಾಗಲಿ" ಎಂದು ನುಡಿದನು.

ಕಂಟಕಮುಖಿ ಶಾಪ ವಿಮೋಚನೆಯಾಗಿ ಅಲಕಾಪುರಿಗೆ ಹೋದ ಮೇಲೆ, ಎಕ್ಕೆಗಿಡಗಳಾಗಿ ಹುಟ್ಟಿದ ಅರ್ಕಳು ವಿಘ್ನೇಶ್ವರನ ಮುಂದೆ ಬಂದು, "ಸ್ವಾಮೀ, ನನ್ನನ್ನು ಕೂಡಾ ಅನುಗ್ರಹಿಸಬೇಕು. ಇಂದ್ರನ ಆಜ್ಞೆಯುನ್ನು ನಿರಾಕರಿಸಿ ಯಾರೂ ಮುಟ್ಟಲಾಗದ ಹೊಲೆಗಿಡವಾಗಿ ಹುಟ್ಟಿದ್ದೇನೆ. ಅರ್ಕ ಎಂಬ ಅಪ್ಸರಸಿ ನಾನು. ನಿಮ್ಮ ಮೇಲೆ





ತುಂಬಾ ಭಕ್ತಿಶ್ರದ್ಧೆಯುಳ್ಳವಳು. ಕಾಪಾಡಿರಿ" ಎಂದು ಬೇಡಿಕೊಂಡಳು.

ವಿಘ್ನೇಶ್ವರನು ಅರ್ಕಳನ್ನು ನೋಡಿ, "ಮುಟ್ಟಲಾಗದು ಎಂದು ಪ್ರಪಂಚದಲ್ಲಿ ಯಾವುದೂ ಇರಲಾಗದು. ನಿನ್ನ ಮೊಗ್ಗೆಗಳನ್ನೂ ಹೂವುಗಳನ್ನೂ ನಾನು ಪ್ರೀತಿಯಿಂದ ಮಾಲೆಯಾಗಿ ಧರಿಸುತ್ತೇನೆ. ನೀನು ದ್ವಾಪರಯುಗದಲ್ಲಿ ಕುಬ್ಜೆಯಾಗಿ ಹುಟ್ಟುವಿ. ಕೃಷ್ಣನಿಂದ ನೀನು ಪುನೀತಳಾಗುವಿ. ನಿನ್ನ ಶಾಪ ಹೋಯಿತು. ನಿಶ್ಚಿಂತಳಾಗಿ ಸ್ವರ್ಗಕ್ಕೆ ಹೋಗು. ನನ್ನನ್ನು ಮೀರಿ ಇಂದ್ರನು ನಿನಗೇನೂ ಮಾಡಲಾರನು. ಯಾರಿಂದಲೂ ನಿನಗೆ ಯಾವ ಭಯವೂ ಇಲ್ಲ. ಯಾರ ಶಾಪವೂ ನಿನಗೆ ತಗಲದು. ಎಕ್ಕೆ ಗಿಡವಾಗಿ ಹುಟ್ಟಿದ ನಿನ್ನ ಆ ಸಸ್ಯರೂಪ ಭೂಮಿಯಲ್ಲಿ ಶಾಶ್ವತವಾಗಿರುತ್ತದೆ. ಅದು ಆಯುರ್ವೇದ ಔಷಧಕ್ಕೆ ಉಪಯೋಗವಾಗಲಿ! ಸೂರ್ಯನಿಗೆ ಪ್ರೀತಿಯಾಗಲಿ!" ಎಂದನು.

ಅರ್ಕ ಅಪ್ಸರೆಯ ರೂಪದಲ್ಲಿ ಸ್ವರ್ಗಾರೋಹಣ ಮಾಡಿದಳು. ವಿಘ್ನೇಶ್ವರನು ತಪಸ್ಸು ಬಿಟ್ಟು ಕೈಲಾಸಕ್ಕೆ ಹೋದನು.

ಪಾರ್ವತಿ ಆಶೆಯಿಂದ "ಕಂದಾ, ತಪಸ್ಸು ಮುಗಿಯಿತಷ್ಟೆ? ಇನ್ನು ಮದುವೆ..." ಎನ್ನಲು, ವಿಘ್ನೇಶ್ವರನು, "ಮುಗಿಯುವುದೆಲ್ಲಿ? ಅಸಲು ತಪಸ್ಸೇ ಸಾಗಲಿಲ್ಲ. ಮತ್ತೆ ಹೋಗಬೇಕು ತಪಸ್ಸಿಗೆ" ಎಂದು ಹೇಳಿ ಹೊರಟು, ತನ್ನ ತಪಸ್ಸಿಗೆ ಇನ್ನೊಂದು ಸ್ಥಳವನ್ನು ಆರಿಸಿಕೊಂಡನು.

ಆ ಪ್ರದೇಶವೆಲ್ಲಾ ಹಾವುಗಳ ಹುತ್ತಗಳು ತುಂಬಿದ್ದುವು. ಸುತ್ತಲೂ ವಲಯಾಕಾರದಲ್ಲಿ ಹುತ್ತಗಳಿರುವ ಜಾಗ ನೋಡಿ ವಿಘ್ನೇಶ್ವರನು ತಪಸ್ಸಿಗೆ ಕುಳಿತನು. ಹುತ್ತಗಳಿಂದ ಹಾವುಗಳು ನೆಟ್ಟಗೆ ಎದ್ದು ಹೆಡೆಬಿಡಿಸಿ ಭುಸುಗುಡುತ್ತ ಕಾವಲು ಕಾಯತೊಡಗಿದುವು.

ಇದನ್ನು ನೋಡಿ ಇಂದ್ರನು ಮೂಷಿಕಾಸುರನ ಅನುಚರರೊಂದಿಗೆ, "ನೋಡಿದಿರಾ! ನಿಮ್ಮ ಒಡೆಯನನ್ನು ವಾಹನವಾಗಿ ಮಾಡಿಕೊಂಡ ವಿಘ್ನೇಶ್ವರನು ನಿಮ್ಮನ್ನೆಲ್ಲಾ ನಿರ್ಮೂಲ ಮಾಡಲು ತಪಸ್ಸು ಮಾಡುತ್ತಿದ್ದಾನೆ. ಹೋಗಿ ಹಗೆ ತೀರಿಸಿಕೊಳ್ಳಿರಿ" ಎಂದು ಕೆರಳಿಸಿದನು.

ಆ ರಾಕ್ಷಸರು ವಿನಾಯಕನ ಮೇಲೆ ದಾಳಿ ಮಾಡಲು ಬಂದರು. ಆಗ ಪಾತಾಳದಿಂದ ಸಾವಿರಾರು ಸರ್ಪಗಳು ಬಂದು ಆ ರಾಕ್ಷಸರನ್ನು ಮುತ್ತಿಕೊಂಡವು. ಅನೇಕರು ಸತ್ತರು. ಉಳಿದವರು ಮದವಿಳಿದು, ತಮ್ಮ ಬುದ್ಧಿ ಹೀನತೆಯನ್ನು ಹಳಿದುಕೊಳ್ಳುತ್ತಾ, ಇಂದ್ರನನ್ನು ಬಯ್ಯುತ್ತಾ ಓಡಿಹೋದರು.

ಅಷ್ಟಕ್ಕೆ ಬಿಡದೆ ಇಂದ್ರನು ಉಲ್ಲಾಸವಂತರಾದ ದೇವತಾಪುರುಷರನ್ನೂ, ಅವರೊಂದಿಗೆ ಅಪ್ಸರಸಿಯರನ್ನೂ ಸೇರಿಸಿ, "ನೀವು ಹೋಗಿ ವಿಘ್ನೇಶ್ವರನಲ್ಲಿ

ಅನುರಾಗೋದಯವಾಗುವ ಹಾಗೆ ನಿಮ್ಮ ಆಟಗಳನ್ನು ತೋರಿಸಿರಿ" ಎಂದು ಆಜ್ಞೆಮಾಡಿ ಕಳುಹಿಸಿದನು. ಅವರ ಹಿಂದೆಯೇ ವಜ್ರಾಯುಧವನ್ನು ಧರಿಸಿ ತಾನೂ ಹೊರಟನು.

ದೇವತೆಗಳು ಅಪ್ಸರಸಿಯರೊಂದಿಗೆ ಸುರಾಪಾನ ಮಾಡುತ್ತ, ಕೋಲಾಹಲದಿಂದ ನಾಟ್ಯ ಪ್ರಾರಂಭಿಸಿದರು. ಸರ್ಪಗಳು ಅವರ ಮೇಲೆ ಹಾರಿ ಸುತ್ತಿ ಅನೇಕರನ್ನು ಕಡಿದುವು. ಇಂದ್ರನು ಸರ್ಪಗಳ ಮೇಲೆ ವಜ್ರಾಯುಧವನ್ನು ಝಳಪಿಸಿದನು. ಪಾತಾಳದಿಂದ ಇನ್ನಿಷ್ಟು ಸರ್ಪಗಳು ಬಂದು, ದೇವತೆಗಳನ್ನೆಲ್ಲ ಸ್ವರ್ಗಕ್ಕೆ ಓಡಿಸಿದುವು. ಆ ಸಮಯದಲ್ಲಿ ವಿಚಿತ್ರವೆನಿಸುವಂತೆ ದೇತೆವತೆಗಳಿಗೂ ಸರ್ಪಗಳಿಗೂ ಒಂದು ಬಗೆಯ ಯುದ್ಧವೇ ನಡೆಯಿತು,

ಸರ್ಪಗಳ ಕಡಿತದಿಂದ ಅಮರರಾದ ದೇವತೆಗಳಿಗೆ ನೋವಾಗುತಿತ್ತೇ ಹೊರತು ಮರಣವಾಗುತ್ತಿದ್ದಿಲ್ಲ. ಇಂದ್ರನ ವಜ್ರಾಯುಧವೂ ಸರ್ಪವಾಹಿನಿಯ ಮುಂದೆ ವ್ಯರ್ಥವಾಯಿತು. ಈ ಬಗೆಯ ಯುದ್ಧ ಮುಗಿದು ಶಾಂತವಾದ ಮೇಲೆ, ವಿಘ್ನೇಶ್ವರನು ನಾಗರ ಸಹಾಯಕ್ಕೆ ಸಂತೋಷಪಟ್ಟು, ಹಾವುಗಳನ್ನು ಮುದ್ದಾಡಿ, ಅಲಂಕಾರವಾಗಿ ತನ್ನ ಮೇಲೆ ಹಾಕಿಕೊಂಡು ಕೈಲಾಸಕ್ಕೆ ಹೋದನು.

ಅವನ ಹಾವಾಡಿಗನಂತಹ ವೇಷ ನೋಡಿ ಪಾರ್ವತಿ ಬೆರಗಾದಳು. "ಆಶ್ಚರ್ಯವೇಕೆ ಅಮ್ಮಾ? ತಂದೆಯ ಸೊತ್ತು ಮಗನಿಗೆ ಸಂಕ್ರಮಿಸಬೇಕಾದುದು ಸಹಜ ತಾನೆ? ಶಂಕರಾಭರಣವು ನನಗೂ ಭೂಷಣವೇ! ಹಾವುಗಳು ನನಗೆ ಪ್ರಾಣ ಮಿತ್ರಗಳಾಗಿ, ತಮ್ಮ ಪ್ರಾಣವನ್ನೇ ತುಚ್ಛೀಕರಿಸಿ ನನ್ನನ್ನು ಕಾಪಾಡಿವೆ. ಆಪ್ತಮಿತ್ರರ ಸಂಗವೇ ನಿಜವಾದ ರಕ್ಷಾದಂಡವಲ್ಲವೇ ಅಮ್ಮಾ? ಅದಕ್ಕೇ ನಾನು ನಾಗಭೂಷಾಯನಾದೆನು" ಎಂದನು ವಿಘ್ನೇಶ್ವರ.

ಅದನ್ನು ಕೇಳಿ ಶಿವನಿಗೆ ಮುಗುಳುನಗು ಬಂತು. ಪಾರ್ವತಿ ವಿನಾಯಕನ ವಿಚಿತ್ರ ಚೇಷ್ಟೆಗಳಿಗೆ ಕೋಪಿಸಿಕೊಂಡಳು. ಅಂತೂ ವಿನಾಯಕನ ಮದುವೆಗೆ ವಿಘ್ನಗಳು ತಪ್ಪಲಿಲ್ಲ.

ಪಾರ್ವತಿ ಮತ್ತೊಂದುಸಾರಿ ಮದುವೆಗೆ ಬಲವಂತ ಮಾಡಿದಳು. "ಅಮ್ಮಾ, ಏನಾದರೂ ಘನಕಾರ್ಯ ಮಾಡಿದರೇನೇ ಸಮರ್ಥನೆನಿಸಲು ಸಾಧ್ಯ. ತಮ್ಮನ ಹಾಗೆ ನಾನು ಕೂಡಾ ಏನಾದರೂ ದೊಡ್ಡ ಕೆಲಸ ಮಾಡಿ ಘನವಂತನೆನಿಸಿಕೊಳ್ಳದೆ ಹೇಗೆ ಮದುವೆಯಾಗಲಿ?" ಎಂದನು ವಿಘ್ನೇಶ್ವರ.

"ನಿನಗೇನು ಕಡಿಮೆಯೋ ಕಂದಾ? ನೀನು ಸಮರ್ಥನಲ್ಲದೆ ಕೇವಲ ದದ್ದಮ್ಮನೆಂದು ಕೊಂಡೆಯಾ?" ಎಂದಳು ಪಾರ್ವತಿ.






೭

ಮರುದಿನ ಪಾದರಸ ಅಲೀ ಮನೆಗೆ ಬಂದುದನ್ನು ನೋಡಿ ಅಹ್ಮದನ ಪ್ರಾಣ ಚೇತರಿಸಿಕೊಂಡಿತು. ತನ್ನ ಪ್ರಿಯಶಿಷ್ಯನ ಜಾಡು ತಿಳಿಯದೇ ಹೋದುದರಿಂದ ಅಹ್ಮದ್ ಚಿಂತೆಯಿಂದ ಊಟ ತಿಂಡಿಗಳನ್ನು ಬಿಟ್ಟು ರಾತ್ರಿ ಸರಿಯಾಗಿ ನಿದ್ದೆ ಕೂಡಾ ಮಾಡದೆ ಗಾಬರಿಯಲ್ಲಿದ್ದನು.

ಬೆಳಗಾದ ಕೂಡಲೇ ತನ್ನ ಹಾಗೆಯೇ ಕೊತ್ವಾಲನಾಗಿರುವ ಹಸನನನ್ನು ಕರೆಯಿಸಿ ಅವನ ಆಲೋಚನೆ ಕೇಳಿದನು. ಅವರಿಬ್ಬರೂ ಮಾತಾಡಿಕೊಂಡಿರುವಾಗಲೇ ಪಾದರಸನು ಮನೆಗೆ ಬಂದು ಸೇರಿದನು. ಅವನು ಕ್ಷೇಮವಾಗಿರುವುದನ್ನು ನೋಡಿ ಅಹ್ಮದನಿಗೆ ಸಮಾಧಾನವಾಯಿತು.

ಪಾದರಸ ಅಲೀ ತನ್ನ ಅನುಭವಗಳನ್ನು ಆ ಇಬ್ಬರು ಕೊತ್ವಾಲರಿಗೂ ವಿವರವಾಗಿ ಹೇಳಿದನು. ಅದನ್ನೆಲ್ಲ ಕೇಳಿ ಹಸನ್ ಕಿರುನಗುವಿನೊಂದಿಗೆ "ಇಂಥಾ ಕೆಲಸ ಮಾಡುವಂಥ ಹುಡುಗಿ ಈ ಬಾಗ್ದಾದ್ ನಗರದಲ್ಲಿ ಒಬ್ಬಳೇ ಒಬ್ಬಳಿದ್ದಾಳೆ. ಪಾರಿವಾಳಗಳ ಟಪಾಲು ಖಾತೆಯನ್ನು ನಿರ್ವಹಿಸುವ ದಿಲ್ಲೈಲಾಳ ಮಗಳು ಜಿನಾಬ್ ಎಂಬವಳು! ಎಂಥವರಿಗೂ ಮಣ್ಣು ಮುಕ್ಕಿಸುವವಳು! ಹೌದು, ಆ ಹುಡುಗಿಯನ್ನು ಏನು ಮಾಡಬೇಕೆಂಬುದು ನಿನ್ನ ಉದ್ದೇಶ?" ಎಂದು ಪಾದರಸ ಅಲಿಯನ್ನು ಕೇಳಿದನು.

"ಮದುವೆ ಮಾಡಿಕೊಂಡುಬಿಡ್ತೇನೆ!" ಎಂದ ಪಾದರಸ. "ಇಷ್ಟು ಮಾಡಿದವಳನ್ನೋ?" ಎಂದು ಹಸನ್ ಆಶ್ಚರ್ಯದಿಂದ ಕೇಳಿದನು.

"ಇನ್ನೂ ಇಷ್ಟು ಮಾಡಿದರೂ ಆ ಹುಡುಗಿಯನ್ನು ಕ್ಷಮಿಸಿಯೇನು. ಅವಳು ನನ್ನ ಹೆಂಡತಿಯಾದರೆ ನನಗೆ ಜೀವಿತದಲ್ಲಿ ಬೇರೆ ಯಾವ ಆಸೆಯೂ ಬಾರದು! ಹೇಗಾದರೂ ಅವಳನ್ನು ಮದುವೆಯಾಗಲೇಬೇಕು." ಎಂದು ಪಾದರಸ ಅಲೀ ಮನಃಪೂರ್ವಕವಾಗಿಯೇ ಹೇಳಿದನು.

"ಒಹೋ! ಸರಿ ಸರಿ! ಇಷ್ಟೊಂದು ಗಾಢವಾದ ಆಶೆ ನಿನಗಿದ್ದರೆ ಅದು ತೀರಲೇಬೇಕು. ನೀನು ಕೂಡಾ ಅವಳಿಗೆ ತಕ್ಕ ಒಳ್ಳೇ ಗಡಸುಗಾರ ಸುಂದರ ಪುರುಷನೇ. ನಿನಗೆ ಅವಳ ಜೋಡಿ ಸರಿಯಾಗೇ ಇದೆ" ಎಂದನು ಹಸನ್.



"ನಮ್ಮವನಿಗೆ ಸ್ವಲ್ಪ ಸಹಾಯ ಮಾಡಯ್ಯಾ ಹಸನ್" ಎಂದನು ಅಹ್ಮದ್. ಹಸನ್ ಸ್ವಲ್ಪ ಆಲೋಚಿಸಿ, ತಲೆಯೊಲಿದು ಒಂದು ಪಥಕವನ್ನು ಅಲೀಗೆ ತಿಳಿಸಿದನು.

ಅದರಂತೆ ಪಾದರಸ ಅಲೀ ತನ್ನ ಶರೀರಕ್ಕೆಲ್ಲಾ ಕರೀರಂಗು ಪೂಸಿಕೊಂಡು ನೀಗ್ರೋರವನ ಹಾಗೆ ಅಂಗವಸ್ತ್ರ ಸುತ್ತಿಕೊಂಡನು. ಕೈಯಲ್ಲಿ ಸ್ವಲ್ಪ ಹಣವನ್ನೂ, ಒಂದಿಷ್ಟು ಭಂಗಿಯನ್ನೂ ತೆಗೆದುಕೊಂಡು ತರಕಾರಿ ಮಾರುವ ಅಂಗಡಿ ಬೀದಿಗೆ ಹೋದನು. ಅಲ್ಲಿ ಅವನು ದಿಲ್ಲೈಲಾಳ ಅಡಿಗೇಯುವನನ್ನು ಹುಡುಕಿ ಕಂಡು ಹಿಡಿದು, "ಅಣ್ಣಾ, ನಾನು ಈ ನಗರಕ್ಕೆ ಹೊಸತಾಗಿ ಬಂದವನು. ನನ್ನ ಜಾತಿಯವನಾದ ನೀನು ಸಿಕ್ಕಿದ್ದು ಸಂತೋಷವಾಯಿತು. ಬಾ, ಸ್ವಲ್ಪ ಸಾರಾಯಿ ಕುಡಿದು ಸಂತೋಷವಾಗಿರುವ." ಎಂದನು ನಗುತ್ತಾ.

ದಿಲ್ಲೈಲಾಳ ನೀಗ್ರೋ ಅಡಿಗೆಯುವನು, "ನನಗೆ ಸ್ವಲ್ಪವೂ ಸಮಯವಿಲ್ಲ. ನಮ್ಮ ಮನೆಗೇ ಬಾ, ಅಲ್ಲಿ ನಿನಗೆ ಬೇಕಾದ ಎಲ್ಲಾ ಬಗೆಯ ಪಾನಗಳು, ತಿಂಡಿಗಳು ಎಲ್ಲವನ್ನೂ ನಾನು ಕೊಡುತ್ತೇನೆ. ನಮ್ಮ ಯಜಮಾನತಿ ಅದಕ್ಕೆಲ್ಲಾ ಏನೂ ಹೇಳುವುದಿಲ್ಲ" ಎಂದನು. ಪಾದರಸನಿಗೆ ಬೇಕಾದುದೂ ಅದೇ ಆಗಿತ್ತು. ಅವನು ಆ ನೀಗ್ರೋನ ಹಿಂದೆ ದಿಲ್ಲೈಲಾಳ ಮನೆಗೆ ಹೋದನು. ಅಡಿಗೇ ಮನೆಯೊಳಗೆ ಹೊಕ್ಕನು, ಇಷ್ಟರಲ್ಲಿ ದಿಲ್ಲೈಲಾ ಜೇನಾಬರು ಭೋಜನಕ್ಕೆ ಬಂದರು. ಅಡಿಗೆಯುವನು ಅವರ ಭೋಜನವನ್ನೂ ಪಾನೀಯಗಳನ್ನೂ ಒಯ್ದು ಒಯ್ದು ಅವರ ಮುಂದೆ ಇಡತೊಡಗಿದನು. ಅವನು ಆಚೆಗೆ ಹೋದಾಗ ಪಾದರಸನು ಪಾನೀಯಗಳಲ್ಲಿ ಭಂಗಿಯನ್ನು ಬೆರೆಸಿದನು.

ಸ್ವಲ್ಪ ಹೊತ್ತಿಗೆ ಪಾದರಸ ಅಲೀಯ ಪ್ರಯತ್ನ ಫಲ ಕೊಟ್ಟಿತು. ದಿಲ್ಲೈಲಾಳೂ, ಜೇನಾಬಳೂ, ನಲವತ್ತು ಮಂದಿ ನೀಗ್ರೋ ಗುಲಾಮರೂ ಕಡೆಗೆ ನೀಗ್ರೋ ಅಡಿಗೆಯುವನೂ ಸಹಾ, ಹೊರಗಿರುವ ಬೇಟೆನಾಯಿಗಳು ಕೂಡಾ ಭಂಗಿಯ ಪ್ರಭಾವದಿಂದ ಇದ್ದಲ್ಲೇ ಪ್ರಜ್ಞೆಯಿಲ್ಲದೆ ಒರಗಿಹೋದರು.

ಪಾದರಸ ಅಲೀ ಯಥೇಚ್ಛವಾಗಿ ಮನೆಯೊಳಗೆ ಎಲ್ಲಾ ತಿರುಗಿದನು. ದಿಲ್ಲೈಲಾಳ ಅಧಿಕಾರದ ದುಸ್ತುಗಳನ್ನೂ, ಬಂಗಾರದ ಟೋಪಿಯನ್ನೂ ನೀಗ್ರೋರ ಕೆಂಪು ಜರಿಯ ದುಸ್ತುಗಳನ್ನೂ ಅಪಹರಿಸಿ ಎಲ್ಲ ಒಟ್ಟಿಗೆ ಒಂದು ಗಂಟು ಕಟ್ಟಿಕೊಂಡನು. "ಈ ಕೆಲಸ ಮಾಡಿದವನು ವೀರಾಧಿವೀರ ಪಾದರಸ ಅಲೀಯ ಹೊರತು ಮತ್ತೊಬ್ಬನಲ್ಲ" ಎಂದು ಒಂದು ಚೀಟೀ ಬರೆದಿಟ್ಟು, ಪಾರಿವಾಳಗಳನ್ನೂ, ಮೂಟೆಯನ್ನೂ ತೆಗೆದುಕೊಂಡು ನೆಟ್ಟಗೆ ಅಹ್ಮದನ ಬಳಿಗೆ ಹೋದನು.

ದಿಲ್ಲೈಲಾಳಿಗೆ ಪ್ರಜ್ಞೆ ಬಂದು ಎಚ್ಚರವಾದಾಗ ಕತ್ತಲೆಯಾಗುತ್ತಾ ಇತ್ತು. ಅವಳು ಪಾದರಸ ಅಲೀ ಬರೆದಿಟ್ಟ ಚೀಟಿ ಓದಿ ನೋಡಿ ಗಾಬರಿಯಾದಳು.

ಮನೆಯೊಳಗೆಲ್ಲಾ ಅಲೆದು ನೋಡಿದಳು. ಅವನು ಖಲೀಫರಿಗೆ ಸಂಬಂಧಿಸಿದ ಸರಕಾರಿ ಸೊತ್ತು ಮಾತ್ರ ಸಂಗ್ರಹಿಸಿಕೊಂಡು ಒಯ್ದಿದ್ದಾನೆಂದು ತಿಳಿದುಕೊಂಡಳು. ದಿಲೈಲಾ ದೀರ್ಘವಾಗಿ ಆಲೋಚನೆ ಮಾಡಿದಳು. ಈ ಸಮಾಚಾರ ಹೊರಗೆ ಹರಡಿಬಿಟ್ಟರೆ ತನ್ನ ಗೌರವಕ್ಕೂ ಉದ್ಯೋಗಕ್ಕೂ ಭಂಗ ಬರುತ್ತದೆಂದು ನೊಂದಳು. ಪಾದರಸ ಅಲೀಯ ಮೇಲೆ ಹಗೆ ಸಾಧಿಸಿಕೊಂಡರೂ ಪ್ರಯೋಜನವಿಲ್ಲವೆನಿಸಿತು. ಅವನಿಂದ ಅಹ್ಮದನೇ ಈ ಕೆಲಸ ಮಾಡಿಸಿರಬೇಕು. ಅವನ ಕಾಲಿಗಾದರೂ ಬಿದ್ದು ಹೋದ ಸೊತ್ತುಗಳನ್ನು ತರುವುದರ ಹೊರತು ಬೇರೆ ದಾರಿ ಕಾಣಲಿಲ್ಲ. ಅಹ್ಮದನ ಮೇಲೆ ಹಗೆ ತೀರಿಸಿಕೊಳ್ಳಲು ತಾನು, ತನ್ನ ಮಗಳ ಮೂಲಕ ಪಾದರಸ ಅಲೀಗೆ ಸೋಲನ್ನುಂಟುಮಾಡಿದರೆ, ಅದಕ್ಕೆ ಪ್ರತಿಕ್ರಿಯೆಯಾಗಿ ಅಹ್ಮದ್ ಆ ಪಾದರಸನ ಮೂಲಕವೇ ತನ್ನ ಮೇಲೆ ಹಗೆ ತೀರಿಸಿಕೊಂಡಿದ್ದಾನೆ. ಎರಡೂ ಸರಿಹೋಯಿತು. ಆದುದರಿಂದ ಇನ್ನು ತನ್ನ ದೊಡ್ಡಸ್ತಿಕೆ ಬಿಟ್ಟು ಮಾತಾಡಿದರೆ ಅಹ್ಮದ್ ತನ್ನೊಂದಿಗೆ ರಾಜೀ ಮಾಡಿಕೊಳ್ಳಬಹುದು.

ಹೀಗೆ ನೆನೆದು ದಿಲೈಲಾ, "ಈಗ ಬರುತ್ತೇನೆ" ಎಂದು ಮಗಳ ಹತ್ತಿರ ಹೇಳಿ, ಅಹ್ಮದನ ಮನೆಗೆ ಹೋದಳು.

ಅವಳು ಅಲ್ಲಿಗೆ ಹೋಗಿ ಮುಟ್ಟಿದಾಗ, ಅಹ್ಮದ್, ಹಸನ್ ಮತ್ತು ಪಾದರಸ ಅಲೀ ಕೂಡಾ ಕುಳಿತುಕೊಂಡು ಭೋಜನ ಮಾಡುತ್ತಾ ಇದ್ದರು. ದಿಲೈಲಾಳನ್ನು ನೋಡಿದ ಕೂಡಲೇ ಅಹ್ಮದ್ ಮತ್ತು ಹಸನ್ ಎದ್ದು ತಲೆಬಾಗಿ ಸಲಾಂ ಸೂಚಿಸಿ, "ದಯ ಮಾಡಬೇಕು ದಿಲೈಲಾ! ಹೀಗೆ ಬಂದು ನಮ್ಮ ಪಂಕ್ತೀಲಿ ಕೂತುಕೊಳ್ಳಿ!" ಎಂದು ಗೌರವದಿಂದ ಆಹ್ವಾನಿಸಿದರು.

ಅವರು ತಿನ್ನುತ್ತಿರುವುದು ಪಾರಿವಾಳಗಳ ಮಾಂಸವೆಂದು ಗೊತ್ತಾದ ಕೂಡಲೇ ದಿಲೈಲಾಳಿಗೆ ಕಣ್ಣು ಕತ್ತಲೆ ಬಂದಿತು. ಅವಳು ನಡುಗುವ ಕಂಠದಿಂದ, "ಅಹ್ಮದನಿಗೆ ನನ್ನ ಮೇಲೆ ಎಷ್ಟೇ ಹಗೆ ಇದ್ದರೂ






ಖಲೀಫಾ ಅವರು ಪ್ರಾಣಪ್ರದವಾಗಿನೋಡಿಕೊಳ್ಳುವ ಅಂಚೆಯ ಪಾರಿವಾಳಗಳನ್ನು ಕಳ್ಳತನದಿಂದ ತರಿಸಿ ಅಡಿಗೇ ಮಾಡಿ ತಿನ್ನುವುದುಂಟೆ? ಎಂಥಾ ಕೆಲಸ ಇದು? ಕಳ್ಳತನಕ್ಕಾದರೂ ಒಂದು ನೀತಿ ಬೇಡವೋ?" ಎಂದು ಕೇಳಿದಳು.

ಹಸನ್ ದಿಲ್ಲೈಲಾಳನ್ನು ಸಮಾಧಾನ ಪಡಿಸುತ್ತ, "ನೀವೇನೂ ಗಾಬರಿ ಬೀಳಬೇಕಾಗಿಲ್ಲವಮ್ಮಾ! ಅಂಚೆಯ ಪಾರಿವಾಳಗಳು ಭದ್ರವಾಗಿವೆ, ಖಲೀಫರ ಸೊತ್ತುಗಳೆಲ್ಲಾ ಭದ್ರವಾಗಿವೆ. ನಮ್ಮದೊಂದು ಸಣ್ಣ ಕೋರಿಕೆ. ಈ ಹುಡುಗನ ಆಶೆ ಪಾಪ! ನೀವು ದಯಮಾಡಬೇಕು. ನಿಮ್ಮ ಪಾರಿವಾಳಗಳೂ, ದುಸ್ತುಗಳೂ ಈ ಕ್ಷಣವೇ ನಿಮಗೆ ಸಿಗುತ್ತವೆ." ಎಂದನು.

"ಅದೇನು ಆಶೆಯೋ ಹೇಳಿಬಿಡಿರಪ್ಪ. ನಾನು ಅಸಹಾಯದವಳೆಂದು ನಿಮಗೇನೂ ಗೊತ್ತಿಲ್ಲದ್ದಲ್ಲ" ಎಂದಳು ದಿಲ್ಲೈಲಾ.

"ಮತ್ತೇನೂ ಅಲ್ಲ. ಈ ಹುಡುಗ ಪಾದರಸ ಅಲೀ ನಿಮ್ಮ ಮಗಳು ಜೀನಾಬಳನ್ನು ಮದುವೆ ಯಾಗಬೇಕು ಅನ್ನುತ್ತಾನೆ" ಎಂದನು ಹಸನ್.

"ಅಯ್ಯೋ ಅಪ್ಪಗಳಿರಾ! ಇದಕ್ಕಾಗಿಯೋ ನನ್ನನ್ನು ಇಷ್ಟೆಲ್ಲಾ ಬಾಧಿಸಿದಿರಿ? ನಾನು ಒಪ್ಪಿ ಕೊಂಡು ಏನು ಲಾಭ? ನನ್ನ ಜೀನಾಬ್ ಒಪ್ಪಿ ಕೊಂಡರೂ ಲಾಭವಿಲ್ಲ. ಏಕೆಂದರೆ ಅವಳಿಗೆ ವಯಸ್ಸು ಬಂದು ಮದುವೆಯಾಗುವ ವರೆಗೂ ರಕ್ಷಕನಾಗಿರುವವನು ಅವಳ ಸೋದರ ಮಾವ. ಅಂದರೆ ನನ್ನ ದೊಡ್ಡಣ್ಣ ಜುರೇಕ್. ಅವನು ಸರಿ ಎಂದ ಹೊರತು ಈ ಮದುವೆಯಾಗುವಂತಿಲ್ಲ. ಇದು ನಿಮಗೆ ಗೊತ್ತಿಲ್ಲದ ವಿಷಯವೇನೂ ಅಲ್ಲ ವಷ್ಟೆ? ಜುರೇಕ್ ಅಣ್ಣ ಮಹಾ ಕಾರ್ಕೋಟಕ! ಅವನನ್ನು ಒಪ್ಪಿಸುವ ಭಾರ ಮಾತ್ರ ಪಾದರಸ ಅಲೀಗೇ ಸೇರಿದೆ. ನಮ್ಮದು ಏನೂ ಇಲ್ಲ" ಎಂದಳು ದಿಲ್ಲೈಲಾ.

"ಸರಿಯಮ್ಮ, ಜುರೇಕರನ್ನು ನೋಡಿ, ಅವರ ಅನುಮತಿ ಸಂಪಾದಿಸಿ ಆಮೇಲೆಯೇ ಜೀನಾಬಳನ್ನು ಮದುವೆಯಾಗುವೆನು" ಎಂದು ಹೇಳಿ ಪಾದರಸ ಅಲೀ ಹೊಸ ಉತ್ಸಾಹದಿಂದ ಎದ್ದನು.

ದಿಲ್ಲೈಲಾ ತನ್ನ ದುಸ್ತುಗಳನ್ನೂ, ಪಾರಿವಾಳ ಗಳನ್ನೂ ತೆಗೆದುಕೊಂಡು ಹೊರಟು ಹೋದಳು.

ದಿಲ್ಲೈಲಾಳ ಅಣ್ಣ ಜುರೇಕನು ಒಂದು ಕಾಲದಲ್ಲಿ ದೊಡ್ಡ ಕಳ್ಳನಾಗಿದ್ದವನು. ಆ ಕಾಲದಲ್ಲಿ ಅವನು ಮಾಡಿದ ಕಳ್ಳತನಗಳಿಗೆ ಲೆಕ್ಕವೇ ಇಲ್ಲ. ಒಂದು ಸಾರಿ ಕೂಡಾ ಸಿಕ್ಕಿಬಿದ್ದವನಲ್ಲ. ಅವನು ಕುಳಿತ ಸ್ಥಳದಲ್ಲಿದ್ದೇ ಎಲ್ಲಿ ಯಾವಾಗ ಬೇಕಾದರೂ ಕಳ್ಳತನ ಮಾಡಿ ಬಿಡುವ ಮಾಯಾ ಮೋಡಿಕಳ್ಳನವನು. ಈಗ ವೃದ್ಧಾಪ್ಯವು ಬಂದುದರಿಂದ ಕಳ್ಳತನವನ್ನು ಬಿಟ್ಟು ಮೀನುಗಳನ್ನು ಬಾಡಿಸಿಯೂ, ಬೇಯಿಸಿಯೂ ಪಕ್ವ ಪಡಿಸಿ ಮಾರಿ ಅದರಿಂದ ಜೀವಿಸಿಕೊಂಡಿದ್ದನು.

ಕಳವಿನ ಸೊತ್ತು, ಬೇಕಾದಷ್ಟಿದ್ದರೂ, ಹೊರಗಿನಿಂದ ಸಂಭಾವಿತನಾಗಿರಲು ಈ ಬೇಸಿ ಮಿನುಗಳ ವ್ಯಾಪಾರ. ಹೀಗಾದರೂ ಆ ಮನುಷ್ಯನಲ್ಲಿ ಈಗಲೂ ಎಷ್ಟೋ ಶಕ್ತಿಗಳು ಇದ್ದುವು.

ಜುರೇಕ ತನ್ನ ಅಂಗಡಿಗೆ ಜನರನ್ನು ಆಕರ್ಷಿಸಲು ಒಂದು ಯುಕ್ತಿ ಮಾಡಿದ್ದನು. ಅಂಗಡಿಯ ಬಾಗಿಲಿನಲ್ಲಿ ಒಂದು ಸಾವಿರ ದೀನಾರಗಳ ಚೀಲವನ್ನು ನೇತಾಡಿ ಸಿಟ್ಟಿದ್ದನು. ಅದನ್ನು ತನಗೆ ತಿಳಿಯದಂತೆ ಯಾರು ಬೇಕಾದರೂ ಅಪಹರಿಸಬಹುದೆಂದು ಊರೊಳಗೆಲ್ಲ ಡಂಗುರ ಹೊಡೆಸಿದ್ದನು.

ಹೇಗಾದರೂ ಅದನ್ನು ಕದ್ದು ಬಿಡೋಣ ವೆಂದು ಸಾವಿರಾರು ಜನರು ಅಂಗಡಿಗೆ ಬಂದು ವ್ಯಾಪಾರ ಮಾಡುತ್ತಿದ್ದರು. ಆದರೆ ಆ ದೀನಾರಗಳ ಚೀಲವನ್ನು ಕದಿಯಲು ಯಾರಿಗೂ ಸಾಧ್ಯವಾಗಿರ ಲಿಲ್ಲ. ಕಾರಣವೇನೆಂದರೆ, ಆ ಚೀಲವನ್ನು ಯಾರಾದರೂ ಮುಟ್ಟಿದರೆ ಸಾಕು. ಅಂಗಡಿಯ ತುಂಬಾ ಕಟ್ಟಲ್ಪಟ್ಟ ಗಂಟೆಗಳೂ, ತಮಟೆಗಳೂ ಒಮ್ಮೆಲೇ ಬಾರಿಸಲ್ಪಡುತ್ತವೆ. ಅದನ್ನು ಕೇಳಿದ ಕೂಡಲೇ ಜುರೇಕ್ ಎಲ್ಲಿದ್ದರೂ ಓಡಿ ಬಂದು ಕಳ್ಳ ನನ್ನು ಹಿಡಿದು ಬಿಡುತ್ತಾನೆ. ಅಥವಾ ಓಡುವ ಕಳ್ಳರ ಮೇಲೆ ಸೀಸದ ಗುಂಡುಗಳನ್ನು ಎಸೆಯುತ್ತಾನೆ. ಅವುಗಳ ಪೆಟ್ಟಿಗೆ ಕೈ ಕಾಲು ಮುರಿದುಕೊಂಡವರೂ ಬಹಳ ಮಂದಿ ಇದ್ದಾರೆ. ಒಬ್ಬಿಬ್ಬರು ಸೀಸದ ಗುಂಡಿ ನಿಂದ ತಲೆಯೊಡೆದು ಸತ್ತಿದ್ದಾರಂತೆ!

ಪಾದರಸ ಆಲೀ ಜುರೇಕನನ್ನು ನೋಡಿದನು. ಅಲ್ಲಿನ ವಿದ್ಯಮಾನಗಳನ್ನು ಮಂದಟ್ಟು ಮಾಡಿ ಕೊಂಡನು. ಆಮೇಲೆ ಜುರೇಕನ ಹತ್ತಿರ ತಾನು ಇಂಥವನೆಂದು ಹೇಳಿ, ಕೋತ್ವಾಲ ಅಹ್ಮದ್‌ರ ಮನೆಯಲ್ಲಿ ತಂಗಿರುವೆನೆಂದೂ, ಜೀನಾಬಳನ್ನು ತಾನು ಮದುವೆ ಮಾಡಿಕೊಳ್ಳಲು ಬಯಸುವೆನೆಂದೂ, ಅದಕ್ಕೆ ಅನುಮತಿ ಕೊಡಬೇಕೆಂದೂ ಕೇಳಿಕೊಂಡನು. ಆದರೆ ಮುದುಕ ಜುರೇಕ್ ಜೀನಾಬಳನ್ನು ಪಾದರಸ ಅಲೀಗೆ ಕೊಡಲು ಒಪ್ಪಲಿಲ್ಲ. ಈ ಅಲೀ ಜೀನಾಬಳಿಗೆ ತಕ್ಕವರನಲ್ಲವೆಂದು ಅವನು ಅಂದುಕೊಂಡನು.

ಪಾದರಸ ಅಲೀಗೆ ಜುರೇಕನಿಟ್ಟ ದೀನಾರಗಳ ಚೀಲವನ್ನು ಅಪಹರಿಸಿ, ಆ ಮೂಲಕ ಅವನ ಅನುಮತಿ ಸಂಪಾದಿಸಬಹುದೆಂದು ತೋರಿತು. ಅದಕ್ಕಾಗಿ ಅವನು ಗರ್ಭಿಣಿ ಸ್ತ್ರೀಯ ಹಾಗೆ ವೇಷ ಧರಿಸಿಕೊಂಡು ಜುರೇಕನ ಅಂಗಡಿಗೆ ಹೋದನು. ಮೀನು ವ್ಯಾಪಾರದಲ್ಲಿ ಚೌಕಾಸಿ ಮಾಡುತ್ತಿರುವಾಗ, ಪ್ರಸವವೇದನೆ ಪ್ರಾರಂಭವಾದಂತೆ ನಟಿಸಿದನು. ಅದನ್ನು ನೋಡಿ ಜುರೇಕ್ ಗಾಬರಿಯಾಗಿ ತನ್ನ ಹೆಂಡತಿಯನ್ನು ಕರೆಯಲು ಒಳಗೆ ಹೋದನು. (ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

ಗೆದ್ದ ಶೀರ್ಷಿಕೆಗಳು ೧೯೮೧ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







S. B. Takalkar — Devidas Kasbekar

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಆಗಸ್ಟ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯ ಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦೦೨೬

---

### ಜೂನ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಇಲ್ಲಿ ಮಿಡಿದ ನಾದವೆಲ್ಲ

ಎರಡನೇ ಫೋಟೋ: ಹೀಗೆ ರೂಪುಗೊಂಡಿತಲ್ಲ!

ಕಳುಹಿಸಿದವರು: ಬಿ. ವಸಂತ,

ಸರಸ್ವತಿಪುರಂ, ಮೈಸೂರು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




ಪರಿಚಯಾತ್ಮಕ
ಕೊಡುಗೆ
25 ಪೈಸೆ
ರಿಯಾಯಿತಿ

**ಇದೋ!**
**ಪೆಪ್ಪರ್‌ಮಿಂಟ್ ರುಚಿ ಸೇರಿದ**
**ಒಂದು ಚಾಕೋಲೇಟ್ ಬಿಸ್ಕೆಟ್**

# ಸ್ಕ್ರನ್ಚ್

## ಕರಕರನೆ ತಿನ್ನಲು ಒಳ್ಳೆಯ ತಿಂಡಿ

ಇಂಡಿಯಾದಲ್ಲಿ, ಇದೇ ತರಹ ಎರಡು ರುಚಿಗಳು ಸಂಯುಕ್ತಗೊಂಡಿರುವ, ಮಧುರವಾದ ತಿಂಡಿ ಎಂದರೆ, ಇದೇ ಮೊದಲನೆಯದು. ಚಾಕೋಲೇಟ್ ಮತ್ತು ಅದರಲ್ಲಿ ಸೇರಿದ ಮಿಂಟ್. ಮೃದುವಾದ, ರುಚಿಕರವಾದ, ಮಿಂಟ್‌ಸೇರಿದ, ಸಮೃದ್ಧಿತ ಚಾಕೋಲೇಟ್ ಕ್ರೀಮ್— ಇದನ್ನು ಗರಿಗರಿಯಾಗಿರುವಂತೆ ಬೇಯಿಸಿದ, ಸುಂದರವಾದ ಹೊಂಬಣ್ಣದ ಎರಡು, ಬಿಸ್ಕೆಟ್‌ಗಳ ನಡುವೆ ಇಟ್ಟರೆ, ಆಹಾ! ಎಂತಹ ರುಚಿ! ನೀವು ಹಿಂದೆಂದೂ ಸವಿಯದೆ ಇರುವಂತಹ ರುಚಿ...ಇಂದೇ ಒಂದು ಪ್ಯಾಕೆಟ್ ಬಿಸ್ಕೆಟ್ ಕೊಳ್ಳಿರಿ. ಕರಕರನೆ ತಿನ್ನಿರಿ...ಸ್ಕ್ರನ್ಚ್... ಸ್ಕ್ರನ್ಚ್... ಸ್ಕ್ರನ್ಚ್...



**ಸ್ಕ್ರನ್ಚ್ ಕರಕರನೆ ತಿನ್ನಲು ಒಳ್ಳೆಯ ತಿಂಡಿ**

ಟ್ರೂ ಬಿಸ್ಕೆಟ್‌ಗಳ ತಯಾರಕರು ಪ್ರಸ್ತುತಗೊಳಿಸಿರುವ ಹೊಸ ತಿಂಡಿ.

HTM-AFL-2345

ವಾಲ್ಟ್‌ಡಿಸ್ನಿಯವರ ವಿಚಿತ್ರ ಪ್ರಪಂಚದಿಂದ
ಮಿಕಿ ಮೌಸ್, ಡೊನಾಲ್ಡ್ ಡಕ್,
ಅಂಕಲ್ ಸ್ಕ್ರೂಜ್, ಗೂಫಿ ಮೊದಲಾದ
ತಮ್ಮ ಮಿತ್ರರು ತಮಗೆ
ವಿನೋದವನ್ನುಂಟುಮಾಡಲು
ಬರಲಿದ್ದಾರೆ

ಚಂದಮಾಮ
ಕ್ಲಾಸಿಕ್ಸ್ ಮತ್ತು ಕಾಮಿಕ್ಸ್
ಕನ್ನಡದಲ್ಲಿ




ಚಂದಮಾಮ ಪಬ್ಲಿಕೇಷನ್ಸ್
ಪ್ರಕಟಣೆ

ಪ್ರತಿ :
ರೂ. ೨-೦೦
ಮಾತ್ರ

CHANDAMAMA ( Kannada )    AUGUST 1981    Regd. No. M. 5210